Koravanji

# ಕೊರವಂಜಿ

ಆಗಸ್ಟ್ ೧೯೪೮



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು:

ಶ್ರೀ॥ ಕೇಶವ
ಶ್ರೀ॥ ಸೋಮು
ಶ್ರೀ॥ ಗಂಗಾಧರ
ಶ್ರೀ॥ ಶಕುನಿ
ಶ್ರೀ॥ ದಾಶರಥಿ ದೀಕ್ಷಿತ್
ಶ್ರೀ॥ ಕುಮಾರ
ಶ್ರೀ॥ ಗೋವಿಂದ
ಶ್ರೀ॥ ಕೇಸರಿ
ಶ್ರೀ॥ ಪಂಡಿತ್
ಶ್ರೀ॥ ಶಿವು
ಶ್ರೀ॥ ಕೆ. ಮುನಿಸ್ವಾಮಿ
ಶ್ರೀ॥ ವೆಂಕಟೇಶ ಮೂರ್ತಿ
ಶ್ರೀ॥ ಪಾಟಾಳಿ

ಇತ್ಯಾದಿ, ಇತ್ಯಾದಿ.

## ತಿಳಿನಗೆಯ ಮಾಸಪತ್ರಿಕೆ

ಬಿಡಿ ಪ್ರತಿ: ಕೇವಲ ನಾಲ್ಕಾಣೆ



# ಕೊರವಂಜಿ



ಸಂಪುಟ ೯ | ಆಗಸ್ಟ್ ೧೯೪೯ | ಸಂಚಿಕೆ ೫


★★

## ಕುಹಕಿಡಿಗಳು

★★

ಮೊನ್ನೆ ಮಳೆ ಬಂದಾಗ ಮಾರ್ಕೆಟ್ ಚೌಕದಲ್ಲಿ ಒಬ್ಬಾತ ಬಾಳೆಹಣ್ಣಿ ಸಿಪ್ಪೆ ಮೇಲೆ ಜಾರಿ ಒಂದು ಪಲ್ಟಿ ಹೊಡೆದು ತಿರುಗಿ ಕಾಲುಮೇಲೇ ನಿಂತನಂತೆ.

—ಮುಂದಿನ ಚುನಾವಣೆಗಳಲ್ಲಿ ಅವನನ್ನು ಮುಖಂಡನನ್ನಾಗಿ ಮಾಡುತ್ತಾರೆಂಬುದು ಇನ್ನೂ ಖಚಿತವಲ್ಲವಂತೆ.

* * *

ಬೆಂಗಳೂರಿನಲ್ಲಿ ಒಂಭತ್ತು ಅಂಗುಲ ಮಳೆ ಬಿದ್ದಿದೆಯಂತೆ—

—ಹೆಚ್ಚು ಆಹಾರ ಬೆಳೆಯಲಿ ಅಂತಲೋ, ಗಡಂಗಿನಲ್ಲಿ ಇದ್ದ ಆಹಾರ ಕೊಳೆಯಲಿ ಅಂತಲೋ !

* * *

ಪ್ರೋರ್ಸಿಲೈನ್ ಕಾರ್ಖಾನೆಯಲ್ಲಿ ಊಟದ ತಟ್ಟೆಗಳನ್ನು ಹೇರಳವಾಗಿ ತಯಾರಿಸುತ್ತಾ ಇದ್ದಾರಂತೆ.

ಊಟ ಸಿಗೋತನಕವಾದರೂ ತಡೆಯಬಾರದೇ ?

* * *

ಯು. ಎನ್. ಓ.ದ ಟ್ರಿಗಲ್ವಿ ಲೈ ಅವರು ಕೆಂಪು ಉಡುಪು ಧರಿಸಿ ಸುತ್ತಿಗೆ ಕುಡುಗೋಲು ಹಿಡಿದಿದ್ದಾರೆಂದು ಅಪಪ್ರಚಾರ ನಡೆದಿದೆಯಂತೆ.

* * *

ಸರ್ ಸ್ಟಾಫರ್ಡ್ ಕ್ರಿಪ್ಸರು "ಡೋಲೋರ್" ಖಾಯಿಲೆಗಾಗಿ ಸ್ವಿಟ್ಸರ್ ಲೆಂಡಿಗೆ ಹೋದರು ಎಂದು ಧಾರವಾಡದ ಮಿತ್ರರು ಹೇಳಿದರು.

—"ಡೋಲರ್" ಎಂದರೆ ನೋವು ಅಂತ ಅಲ್ಲವೇ? ಯಾವುದೋ ಭಾಷೇಲಿ

* * *

"ಬಟ್ಟೆ ಮೇಲಿನ ಹತೋಟಿ" ಸಡಿಲಮಾಡಲ್ಪಟ್ಟಿದೆಯಂತೆ—

—ಹೇಗಪ್ಪಾ ! ಮಾನವಾಗಿ ರಸ್ತೇಲಿ ಹೋಗೋದು !

* * *

"ತೋಳ ಸಾಕಿದ ಹುಡುಗ".... (ಪತ್ರಿಕೆ)

—ಕಾಳಸಂತೆಯ ಧನಿಕರನ್ನು ಹೀಗೆ ಅನ್ನಬಹುದೇ ?

* * *

"ಫ್ರಾನ್ಸಿನಲ್ಲಿ ಈಗ ಹಾಲು ಸಮೃದ್ಧಿಯಾಗಿ ಸಿಗುತ್ತದೆ. (ಸಚಿವರು)

—ಅಲ್ಲಾ ಫ್ರಾನ್ಸಿಗೆ ಹೋಗಿ, ಬಯಸಿಬಯಸಿ, ಹಾಲೇ ಕುಡಿಯೋದು ?

* * *

ಈಸಾರಿ ಐ.ಎ.ಎಸ್.ನಲ್ಲಿ ಇಬ್ಬರು ಸ್ತ್ರೀಯರು ಉತ್ತೀರ್ಣರಾಗಿದ್ದಾರಂತೆ

—ಅಂದರೆ ಇಬ್ಬರು ಗಂಡಸರು ಇನ್ನು ಸುಖವಾಗಿರಬಹುದಲ್ಲ !

* * *

ಗೋಪಾಲರಾಯರ ವ್ಯವಹಾರದಲ್ಲಿ ಸರ್ಕಾರದವರು ಸದ್ಯಕ್ಕೆ ನಾಲ್ಕಾಣೆ ಯಂತೆ ಹಣ ಕೊಟ್ಟಿದ್ದಾರಂತೆ.

* * *

ಸ್ವಲ್ಪ ಕಿವುಡಾಗಿದ್ದರೆ ಸಂಗೀತ ಚೆನ್ನಾಗಿ ಹಾಡಬಹುದಂತೆ.

—ಇರಬೇಕು ! ಸ್ವಲ್ಪ ಕುರುಡಾದರೇ ಈ ಹಣಬರಿಸುವ ಚಿತ್ರಗಳನ್ನು ನಿರ್ಮಾಪಿಸಿರಬೇಕು.

* * *

ಬೆಂಗಳೂರಿನಲ್ಲಿ ರಾತ್ರಿ ಒಂಭತ್ತು ಗಂಟೆಗೆ ದೀಪ ಆರಿಸಿ ಹಚ್ಚುವುದನ್ನು ನಿಲ್ಲಿಸಿದ ಮೇಲೆ, ಅಧಿಕಾರಿಗಳನ್ನು ಹೆಂಗಸರು ಮಕ್ಕಳೂ ಕೂಡ "ಯಾಕೆ ಸಾರ್ ! ಈಗ ವಿಂಕ್ ಮಾಡುಲ್ಲ ! " ಅಂತ ಕೇಳುತ್ತಿದ್ದಾರಂತೆ.

---

# ಉರಿಗಾಳು

— o —

ಮೈಸೂರು ಸಂಸ್ಥಾನದಿಂದ ನಿವೃತ್ತರಾಗುವಾಗ, ಸರ್. ಆರ್ಕಾಟ್ ರಾಮುಸ್ವಾಮಿ ಮೊದಲಿಯಾರ್‌ರವರು ತಮಗೆ ಇಲ್ಲಿ ದೊರೆತ, ಓ.ಸಿ.ಹೆಚ್. ಎಂಬ ಬಿರುದನ್ನು ಇಲ್ಲೇ ಬಿಟ್ಟು ಹೋಗುವರು ಎಂಬ ವದಂತಿ ಹಬ್ಬಿದೆ..

*　　　*　　　*

ಕಮ್ಯೂನಿಸಂನ್ನು ತಮ್ಮ ಕೈಲಾದಷ್ಟು ತಡೆಗಟ್ಟಲು ಕಾಂಗ್ರೆಸ್ ಮಂತ್ರಿಗಳು ತಮ್ಮ ಸಂಬಳ ಸಾರಿಗೆಗಳನ್ನು ಅರ್ಧಕ್ಕರ್ಧ ಇಳಿಸಿಬಿಡಬಹುದೆಂಬ ಸುದ್ದಿಗೆ ಇನ್ನೂ ಸಮರ್ಥನೆ ದೊರೆತಿಲ್ಲ.

*　　　*　　　*

ರೂಪಾಯಿಯ ಬೆಲೆಯನ್ನು ಇನ್ನು ಇಳಿಸಲು ಸಾಧ್ಯವೇ ಇಲ್ಲ ಎಂಬುದೇ ಆರ್ಥಿಕ ಮಂತ್ರಿಯ ಅಭಿಪ್ರಾಯ....ನಮ್ಮ ಅಭಿಪ್ರಾಯವೂ ಅದೇ ಆಗಿದೆ.

*　　　*　　　*

ಸಾಮಾನ್ಯ ಮನುಷ್ಯರ ಹೃದಯವಿದ್ರಾವಕ ಕತೆಗಳನ್ನು ನಮಗೆ ಒದಗಿಸಿಕೊಡಿ, ಎಂದು ಶ್ರೀ ಶಾಂತಾರಾಂರವರು ಕನ್ನಡ ಸಾಹಿತಿಗಳನ್ನು ಕೇಳಿಕೊಂಡರು ...ಆದ್ದರಿಂದ, ಪ್ರತಿ ಒಬ್ಬ ಸಾಹಿತಿಯೂ ತನ್ನ ಆತ್ಮ ಚರಿತ್ರೆಯನ್ನು ಬರೆದು ಅವರಿಗೆ ಒಪ್ಪಿಸಲಿದಾರಂತೆ.

*　　　*　　　*

"ಮರಗಳನ್ನು ನೆಡಿ" ಎಂಬ ಚಳುವಳಿಗೂ, ಮಂತ್ರಿಗಳ ಪ್ರವಾಸಕಾಲವಲ್ಲಿ ಹಸುರುವಾಣಿ ಚಪ್ಪರಗಳು ಈಚೆಗೆ ಕಡಿಮೆ ಬೀಳುತ್ತಿರುವುದಕ್ಕೂ, ಏನೂ ಸಂಬಂಧವಿಲ್ಲವೆಂದು ಅಧಿಕಾರ ವಲಯಗಳಲ್ಲಿ ಹೇಳಲಾಗಿದೆ.

*　　　*　　　*

"ಹಳ್ಳಿಹಳ್ಳಿಯಲ್ಲೂ ಹೊಸಹೊಸ ಬಗೆಯ ನಾಟಕಗಳನ್ನಾಡಿ ಅವರನ್ನುದ್ಧರಿಸಲು ಏರ್ಪಾಟು ಮಾಡಲಾಗುವುದು" (ಭಾಷಣ)....ಈಗ, ಆಡುತ್ತಿರುವ ನಾಟಕವೇ ಅವರಿಗೆ ಸಾಕು ಸಾಕೆನಿಸಿದೆ.

*　　　*　　　*

"ಮೇಷ್ಟರುಗಳನ್ನು ನಿಯಮಿಸುವ ತನಕ ಶಾಲಾ ಹುಡುಗರು ಮುಷ್ಕರ ಹೂಡಿರುವರು" .. ಪಾಪ! ಕಷ್ಟಪಟ್ಟು ಶಾಲೆಗೆಹೋದರೆ, ಅಲ್ಲಿ ಅವರ ವಿನೋದ ಕ್ಕಾಗಿ ಮೇಷ್ಟರ ಪಾಠಗಳು ಬೇಡವೆ?

*　　　*　　　*

"ಪಾನನಿರೋಧ ಜಾರಿಗೆ ಬಂದಿರುವ ಸ್ಥಳಗಳಲ್ಲೆಲ್ಲ ಗೃಹಕೈಗಾರಿಕೆಗಳನ್ನು ಸ್ಥಾಪಿಸಿ ಅಭಿವೃದ್ಧಿಗೊಳಿಸಲಾಗುತ್ತದೆ" (ಭಾಷಣ) ಅಲ್ಲೆಲ್ಲ ಹೆಚ್ಚು ಜನಪ್ರಿಯ ವಾದ ಗೃಹಕೈಗಾರಿಕೆ ಎಂದರೆ, ಮದ್ಯದ ತಯಾರಿಕೆ.

*　　　*　　　*

ಯು. ಎನ್. ಓ. ಸಂಸ್ಥೆಯ ಕಚೇರಿಗೆ ನಮ್ಮ ಸಂಸ್ಥಾನದಿಂದಲೂ ಕೆಲವು ಉನ್ನತ ಅಧಿಕಾರಿಗಳನ್ನು ಆರಿಸಿ ನಿಯಮಿಸಿಕೊಳ್ಳುತ್ತಾರಂತೆ.. ಇದನ್ನು ಕೇಳಿ, ಪ್ರಜಾಸ್ತೋಮ ಯಾಕೋ, ಏನೋ, ತುಂಬ ಹರ್ಷಗೊಂಡಿದಾರೆ.

*　　　*　　　*

"ಕಾಂಗ್ರೆಸ್ ಪಕ್ಷಕ್ಕೆ ಒಂದು ಎದುರು ಪಕ್ಷವನ್ನು ಸೃಷ್ಟಿಮಾಡಲು, ಕಾಂಗ್ರೆಸ್‌ನವರೇ ಮುಂದೆ ಬಂದು ಸರ್ವ ವಿಧದಲ್ಲೂ ಸಹಾಯಮಾಡುತ್ತಿರು ವುದು ಶ್ಲಾಘನೀಯವಾದ ವಿಷಯ" (ಲೇಖನ)... ಮುಂದೆ ಬಂದು, ಎನ್ನುವುದ ಕ್ಕಿಂತ "ಹಿಂದೆ ಬಿದ್ದು" ಎಂದು ಹೇಳುವುದೇ ಸರಿ ಎನಿಸುತ್ತದೆ.

*　　　*　　　*

ಕಾಮನ್‌ವೆಲ್ತ್ ಟೀಮಿನವರು ಇಂಡಿಯಾದಲ್ಲಿ ಆಗಲಿರುವ ಐದು ಟೆಸ್ಟು ಗಳ ರೇಡಿಯೋ ವ್ಯಾಖ್ಯಾನ ಕೇಳುವುದಕ್ಕಾಗಿ, ಆಯಾ ದಿನಗಳಲ್ಲಿ ಶಾಲಾ ಕಾಲೇಜುಗಳನ್ನು ಮುಚ್ಚಬೇಕೆಂಬ ನಿರ್ಣಯವನ್ನು ವಿದ್ಯಾರ್ಥಿ ವೃಂದವು ಅಂಗೀಕರಿಸಿದೆಯಂತೆ.

*　　　*　　　*

"ಹೆಚ್ಚು ಆಹಾರ ಬೆಳೆಯಿರಿ"—ಎಂಬ ಚಳುವಳಿ ಜಯಪ್ರದವಾಗದಿರುವು ದಕ್ಕೂ, ಪಾನನಿರೋಧಕ್ಕೂ, ಏನಾದರೂ ಸಂಬಂಧವಿದೆಯೇ ಎಂದು ಪರಿ ಶೀಲಿಸಲು ಒಂದು ಸಮಿತಿ ರಚನೆಯಾಗಲಿದೆಯಂತೆ.

*　　　*　　　*

"ದೇಶದ ಹೊಸವಾತಾವರಣಕ್ಕೆ ಅಧಿಕಾರಿಗಳು ಇಷ್ಟು ಶೀಘ್ರದಲ್ಲೇ ಹೊಂದಿಕೊಂಡಿರುವುದನ್ನು ನೋಡಿದರೆ........" ........ಭಯವಾಗುತ್ತದೆ.

*　　　*　　　*

# ಕೊಂಡಾಟ

---

ಮೊನ್ನೆ ಮದ್ರಾಸಿಗೂ, ಮೈಸೂರಿಗೂ ಪ್ರವಾಸ ಬಂದಿದ್ದ ಶ್ರೀ ಶಾಂತಾರಾಂರವರಿಗೂ, ಅವರ ಧರ್ಮಪತ್ನಿ ಶ್ರೀಮತಿ ಜಯಶ್ರೀಯವರಿಗೂ ದೊರೆತ ಮನ್ನಣೆಯನ್ನು ಕಂಡಾಗ, ರಾಜಕೀಯ ಪಕ್ಷವೊಂದಕ್ಕೆ ಅದ್ಭುತವಾದ ಒಂದು ಯೋಚನೆ ಹೊಳೆದಿದೆಯಂತೆ: ತರುಣರೇ ದೇಶದ ಸಂಪತ್ತು; ಇಂದಿನ ಯುವಕರೇ ಇಂದಿನ ಜನಾಭಿಪ್ರಾಯವನ್ನು ರಚಿಸುವವರು. ಅವರ ಕನಸು ನನಸಾಗದಿರದು. ಭರತ ಖಂಡಕ್ಕೆ ಸ್ವಾತಂತ್ರ್ಯವನ್ನು ಸಂಪಾದಿಸಿಕೊಟ್ಟವರೇ ಅವರಲ್ಲವೆ? ಆದ್ದರಿಂದ, ಅವರ ಕಣ್ಮಣಿಗಳನ್ನೇ ಉಮೇದುವಾರರಾಗಿ ನಿಲ್ಲಿಸಿದರೆ, ಹಾಗೆ ನಿಲ್ಲಿಸುವ ಪಕ್ಷಕ್ಕೆ ಜಯ ಸಿದ್ಧ. ಈ ತತ್ವವನ್ನು ಒಪ್ಪಿಕೊಂಡರೆ, ಎರಡು ಬಗೆಯ ಕಾರ್ಯಕ್ರಮವನ್ನು ರಾಜಕೀಯ ಪಂಗಡದವರು ತೆಗೆದುಕೊಳ್ಳಬೇಕಾಗುತ್ತದೆ.

೧. ಸಿನಿಮಾ ತಾರೆಗಳನ್ನು ಮಂತ್ರಿಮಂಡಲದೊಳಗೋ ಅದರ ತೀರ ಹತ್ತಿರವೋ ಸದಾ ಇರಿಸಿಕೊಂಡರೆ, ಕ್ಷೇಮ. ಬಾಂಬು ಬೈಗುಳ ಯಾವುದರ ಭಯವೂ ಇಲ್ಲದೆ, ತಾರೆಗಳ ಮರೆಯಲ್ಲಿ ಅವರು ಬಚಾವಾಗಬಹುದು. ಟೀಕೆಗಳು ಕಟುವಾದ ಕೂಡಲೇ, ಜನಮನವನ್ನು ಸೂರೆಗೊಂಡಿರುವ ಶ್ರೀ ಎನ್. ಎಸ್. ಕೃಷ್ಣನ್‌ರವರಿಂದ ಒಂದು ನಲ "ಅಯ್ಯೊಡಾ" ಎಂದು ಅನ್ನಿಸಿದರಾಯಿತು; ಟೀಕಾಕಾರರೆಲ್ಲ ನಗುವಿನಲ್ಲಿ ಮುಳುಗಿ, ತೃಪ್ತಿನಾಗರದಲ್ಲಿ ತೇಲಿ, ಪ್ರೀತಿ ರಸವನ್ನು ಹರಿಸಿಬಿಡುವರು. ಅವರ ಮಾತಿಗೆ ಮುಗ್ಧರಾಗಿ, ಕಂಠಕ್ಕೆ ಗಂಟುಬಿದ್ದು, ಯುವಕರೆಲ್ಲರೂ ಇಡೀ ಮಂಡಲಕ್ಕೇನೇ ಜೈಕಾರ ಮಾಡುತ್ತಾರೆ. ತಮ್ಮ ಅಚ್ಚುಮೆಚ್ಚಿನ ಕಲಾ ಪುತ್ಥಳಿಯೊಂದಕ್ಕೆ ಗೌರವಸ್ಥಾನ ದೊರಕಿಸಿ ಕೊಟ್ಟು, ಸದಾ ದೇಶದ ಮುಂದೆ ನಿಲ್ಲಿಸಿದ ರಾಜಕೀಯ ಪಕ್ಷವನ್ನು ಕಲಾಪ್ರೇಮಿಗಳಾದ ತರುಣರು ಎಂದೆಂದಿಗೂ ತೆಗಳುವುದಿಲ್ಲ.

೨. ಮಂತ್ರಿಗಳಲ್ಲೇ ಹಲವರು, ತಮ್ಮ ಮೇಲೆ ಪ್ರಜಾವಾತ್ಸಲ್ಯ ಕಡಮೆಯಾಗುತ್ತಿದೆ ಎಂಬ ಗಾಬರಿ ಬಂದ ಕೂಡಲೇ, ಯಾವುದಾದರೂ ಸ್ಟೂಡಿಯೋವನ್ನು ಪ್ರವೇಶಿಸಿ, ಕಡೆಯ ಪಕ್ಷ ಒಂದು ಕಾಕಮ್ಮನ ಕಥೆಯ ಹೀರೊ ಆಗಿ 'ಷೂಟ್' ಮಾಡಿಸಿಕೊಳ್ಳಬೇಕಾಗಿಬರುತ್ತದೆ. ಚಿತ್ರ ಎಷ್ಟು ವಕ್ರವಾದರೂ,

ಪ್ರಚಾರ ತಂತ್ರದಿಂದ ಜನರನ್ನು ಬಕ್ರ ಬಕ್ರವಾಗಿಸಬಹುದಲ್ಲಾ! ತಾವು ಮೋಸಹೋದಂತೆ, ಎಲ್ಲರೂ ಮೋಸಹೋಗಲಿ ಎಂಬ ಉದ್ದೇಶದಿಂದ, ಯಾರೂ ಬಹಿರಂಗವಾಗಿ ಚಿತ್ರವನ್ನು ಬಯಲಿಗೆ ಎಳೆಯುವುದಿಲ್ಲ—ಒಂದು ಒಳ್ಳೆಯ ಚಿತ್ರ ಪ್ರದರ್ಶನಕ್ಕೆ ಸಿಗಬೇಕಾದರೆ, ಅಂಥ ನಾಲ್ಕು ಹೊಲಸು ಚಿತ್ರಗಳನ್ನು ತೆಗೆದು ಕೊಳ್ಳಲೇ ಬೇಕು ಎಂಬ ಷರತ್ತನ್ನು ಮಾಡಿ, ಹಂಚಿಕೆಗಾರರು ಅವನ್ನೂ ಜನರ ಕಣ್ಣಮುಂದೆ ಬೆಳಗಿಸಿಯೇ ಬಿಡುವರು. ತಾರೆ ಎನಿಸಿದ ಮಂತ್ರಿಯನ್ನು ಯುವಕ ವೃಂದವೇ ಕೊಂಡಾಡುತ್ತದೆ. ಯುವಕರ ಕೊಂಡಾಟ ಲಭಿಸಿದ ಅನಂತರ, ಮಂಡಲ ಯಾವ ಪುಂಡಾಟಕ್ಕೂ ಹೆದರಬೇಕಾಗಿಲ್ಲ.

—ಕೇಶವ.

---



ಮಾವಿನಹಣ್ಣು ತಿನ್ನಬೇಡ ಅಂದ್ರಲ್ಲ ಆ ಡಾಕ್ಟರು—ಅದಕ್ಕೋಸ್ಕರ ಅವರ ಮನೇಲಿ ಇದನ್ನು ಕದ್ದು ಬಂದೆ; ರುಚಿಯಾಗಿದೆ ಅಲ್ವೇನೋ ?

# "ಹೊಟ್ಟೆ ಮೇಲೆ ಹೊಡೆದರೆ—ಹಾಡ್ತಾನೆ"

— ೧ —

ನಮ್ಮ ಶಂಭುದೇ ಒಂದು ವಿಚಿತ್ರ ಆರು ವರ್ಷಗಳಿಂದ ಅವನನ್ನ ನೋಡುತ್ತಿಲ್ಲ. ಕುಕ್ಕನಹಳ್ಳಿ ಕೆರೆ ಏರಿ ಮೇಲೆ "ವಾಕಿಂಗ್"ಗೆ ಅಂತ ಹೋದ ಅವತ್ತು ಸಾಯಂಕಾಲ, ಸಿಕ್ಕ. ಏನಯ್ಯಾ? ಶಂಭು ಹೇಗಿದಿ ಅಂತ ಕೇಳಿದರೆ ಮೂರು ನಿಮಿಷ ಮಾತೇ ಬೇಡವೇ? ಮುಖವೋ ಇಳಿದು ಹೋಗಿದೆ, ಹಣೆ ಇಂದ ಎದೆ ತನಕ ಮುಖವೇ ಅನ್ನೋ ಹಾಗಿದೆ. ಯಾಕೆ ಇಷ್ಟು ತೆಗೆದು ಹೋಗಿದ್ದಾನೆ ಎಂದುಕೊಂಡೆ. ಮೂರು ನಿಮಿಷ ನನ್ನನ್ನೇ ನೋಡಿ ಆಮೇಲಿಂದ "ನೋಡೋ ಸೋಮು! ಆರು ವರ್ಷದಿಂದ ನಿನ್ನ ಮುಖ ನೋಡಿಲ್ಲ.—ನೀನು ಎಲ್ಲಿದಿ ಅಂತ ಗೊತ್ತಿಲ್ಲ. ಇವತ್ತು ಇಲ್ಲಿ ಸಿಗಬೇಕೇ?—ಇದರಲ್ಲೆಲ್ಲೋ ದೇವರ ಕೈವಾಡ ಇರಬೇಕು ಕಣೋ" ಎಂದ.

ಕೆರೆ ಏರಿ ಮೇಲೆ ವಾಕಿಂಗ್ ಹೋದಾಗ ಹಳೇ ಸ್ನೇಹಿತ ಸಿಕ್ಕಿದರೆ ಅದರಲ್ಲಿ ದೇವರ ಕೈವಾಡ ಏನು ಬಂತು? ಇದು ಯಾಕೋ ಹೀಗಂತಿ ಅಂದೆ.

ಆಗ ಹೇಳಿದ "ಮೂರು ತಿಂಗಳ ಹಿಂದೆ ಇದ್ದೊಬ್ಬ ಹುಡುಗ ಡಿಫ್ತಿರಿಯಾ ಬಂದು ಹೋಗಿಬಿಟ್ಟ. ಅದರ ದುಃಖ ತಡೀಲಾರದೆ ನನ್ನ ಹೆಂಡತೀಗೆ ಬುದ್ಧಿ ಭ್ರಮಣೆ ಬಂತು. ನಿನ್ನೆ ತಾನೆ ಹುಚ್ಚಾಸ್ಪತ್ರೇಲಿ ಸೇರಿಸಿಬಿಟ್ಟು ಬಂದೆ. ಇವತ್ತು ಕಛೇರೀಲಿ ನನ್ನ ಕೆಳಗೆ ಕೆಲಸ ಮಾಡ್ತಾ ಇದ್ದೋನ್ನ ನನ್ನ ಮೇಲೆ ಏರಿಸಿದರು. ಬೇಜಾರಾಗಿತ್ತು. ಕುಕ್ಕನಹಳ್ಳಿ ಕೆರೇಲಿ ಮುಳುಗೋಣ ಅಂತ ಬಂದಿದ್ದೆ—ನೀನು ಸಿಕ್ಕಿ—ಆ ಮಾರ್ಗಾನೂ ಈಗ ಬಂದಾಯ್ತು. ಅದಕ್ಕೇ ಹೇಳಿದ್ದು ಇದರಲ್ಲಿ ದೇವರ ಕೈವಾಡ ಎಲ್ಲೋ ಇದೆ ಅಂತ"

ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ರಾಮಕೃಷ್ಣ—ಅರಬಿಂದೋ ರಮಣ ಮಹರ್ಷಿ ಇವೆಲ್ಲರ ಸಹಾಯವನ್ನು ಪಡೆದು ಅವನಿಗೆ ವೇದಾಂತವನ್ನು ಅರೆದು ಹುಯ್ದೆ. ಇದಕ್ಕೇನು ಕಷ್ಟಪಡಬೇಕು ಹೇಳಿ. ಅವನಿಗೆ ಬಂದಿದ್ದು ಕಷ್ಟ. ನಾನು ಸುಖವಾಗೇ ಇದ್ದೆ. ಅದಕ್ಕೇ ವೇದಾಂತದ ತಿರುಳನ್ನೇ ಅರೆದು ಹುಯ್ದಿದ್ದು. ನಾನು ಕುಡಿಬೇಕಾಗಿ ಬಂದಾಗ ಅಲ್ಲವೇ ಕಷ್ಟ!

ಅವನನ್ನು ಅವನ ಮನೇಲಿ ಬಿಟ್ಟು, ನಾನೂ ಮನೆಗೆ ಹೋದೆ.

*  *  *

ಹದಿನೈದು ದಿವಸಗಳಾದ ಮೇಲೆ ಕನ್ನಡ ಕೂಟದಲ್ಲಿ ಒಂದು ಸಭೆ, ಯಾವುದೋ ಫಳಿಗೇಲಿ, ಛತ್ರದ ಹೊಟ್ಟೆನ್ನು ಹೋಟಲಿಗೆ ಮಾರಿ, ಬಂದ ಐನೂರಲ್ಲಿ ಐವತ್ತನ್ನ ಈ ಕನ್ನಡ ಕೂಟಕ್ಕೆ ಕೊಟ್ಟಿದ್ದೆ. ತತ್ಕಾರಣ ಆ ಸಭೆಗೆ ವಾಣಿಜ್ಯಮುಖಂಡ ನನ್ನನ್ನು ಅಧ್ಯಕ್ಷತೆಗೆ ಒಪ್ಪಿಸಿದ್ದರು. ಆ ಕೂಟದಲ್ಲಿ ಕವಿಗಳ ಗೀತಾ ವಚನವೂ ಒಂದು. ಹೀಚು, ದೋರೆಗಾಯಿ, ಇತ್ಯಾದಿಗಳು ತಮ್ಮ ತಮ್ಮ ಕವನಗಳನ್ನು ಓದಿದರು. ಕಡೇ ಪಠಣ ಶಂಭುದು. ತಾನು ಬರೆದ ಗೀತೆಯನ್ನು ಒಂದನ್ನು ಆಡಿ ತೋರಿಸಿದ ನನಗೆ ಕುಕ್ಕನಹಳ್ಳಿ ಕೆರೆ ಏರಿ ಎಲ್ಲಾ ಕಣ್ಣಿಗೆ ಕಟ್ಟಿದಂತಾಯ್ತು. ಈರುಳ್ಳಿ ಹೆಚ್ಚಿದರೂ ನೋಡಿ ನನ್ನ ಕಣ್ಣಲ್ಲಿ ನೀರು ಬರುಲ್ಲ. ಎಂಥೆಂಥಾ ಬೈಗಳನ್ನೂ ನುಂಗಿದ್ದೇನೆ ವ್ಯಾಪಾರದಲ್ಲಿ, ತೆಂಗಿನಕಾಯಿ ನುಂಗಿದರೂ ಗಂಟಲು ಒತ್ತುಲ್ಲ—ಇಂಥಾ ನನಗೆ ಅವತ್ತು ಗಂಟಲು ಏನೋ ಒತ್ತಿತು. ಪಂಚೆ ತುದಿಯಿಂದ ಕಣ್ಣು ಒರೆಸಿಕೊಂಡೆ—ಅವನು ಮುಗಿಸಿದ ಒಂದು ನಿಮಿಷ ನಿಶ್ಶಬ್ದ. ಆ ಮೇಲೆ ಸಭೆಗೆ ಸಭೆಯೇ ಚಪ್ಪಾಳೆ ತಟ್ಟಿತು ನೋಡಿ, ನನ್ನ ಕನ್ನಡಕ ನನ್ನ ಮೂಗಿನ ಮೇಲಿಂದ ಹಾರಿ ಹೋಗೋ ಹಾಗೆ—

ಅವನಿಗೇ ನಾನು—ಅಧ್ಯಕ್ಷ—ಅತ್ಯುತ್ತಮ ಕವಿತೆಗೆ ಅಂತ ಒಂದು ರಜತ ಕಂಡವನ್ನು ಬಹುಮಾನವಾಗಿ ಕೊಟ್ಟೆ—

—ಅದಕ್ಕೇ ಹೇಳಿದ್ದು—ಅಲ್ಲಾ ಈ ಪ್ರಾಣಿಗಳಿಗೆ ಹೊಟ್ಟೆ ಮೇಲೆ ಹೊಡೆ ದರೆ—ಹಾಡ್ತಾರಲ್ಲಾ! ಅಂತ—ಅದೂ ಅಷ್ಟು ನೊಗಸಾಗಿ ಹಾಡ್ತಾರಲ್ಲಾ! ಅಂತ

—ಸೋಮು.




ಬನ್ರೀ! ಬನ್ರೀ! ರೇಡಿಯೋ ಜಟ್ಕಾ.
ಅದ್ಕೀಗೆ ಎರಡಾಣೆ! ಮಾರ್ಕೆಟ್ಟಿಗೆ—

# ಕೊರವನ ಸಿಂಹಾವಲೋಕನ!

---

ಬೆಂಗಳೂರಲ್ಲಿ ಮೊನ್ನೆ ನಾಲ್ಕು ಅಂಗಲ ಮಳೆ ಬಿತ್ತಂತಯ್ಯಾ ಚರ್ರಾ ಪುಂಜಿ ತರಹ ಮಳೆಯಂತೆ ಅಂತಂದರು ರಾಯರು, ನಶ್ಯ ತೀಡುತ್ತಾ.

ಆಗಂದ ಕೊರವ- ಾ ಮಳೆ ಬಂದರೆ ತಾನೇ ಏನಂತೆ ಅಲ್ಲಿನ ಅನ್ಯಾಯ, ಅಪಸ್ಮಾರೆ, ಅಯೋಗ್ಯತೆಗಳನ್ನು ಕೊಚ್ಚಿಕೊಂಡು ಹೋಗಲು ನಾಲ್ಕು ಅಂಗುಲ ಮಳೆ ಸಾಲದು, ಏನೇನೂ ಸಾಲದು. ನಾಲ್ವತ್ತು ಅಂಗುಲ ಮಳೆ ಬೀಳಬೇಕು. ಅಂತ

* * *

“ಕಲ್ಕತ್ತಾದಲ್ಲಿ ಪಂಡಿತಜೀಯವರು ಹೋದಾಗ, ಅಲ್ಲಿನ ದುಷ್ಕರ್ಮಿಗಳು ಮಾಡಿದ ಅಪಚಾರದ ಸಲುವಾಗಿ ಒಬ್ಬ ಪೋಲೀಸಿನವನು ಸತ್ತ” ಎಂದು ಆಚಾರ್ಯರು ಯಥಾಪ್ರಕಾರ ದಿನಪತ್ರಿಕೆಯನ್ನು ಗಟ್ಟಿಯಾಗಿ ಓದಿದರು.

ಆ ಊರಿನಲ್ಲಿ ಸತ್ತ ಪೋಲೀಸಿನವನು ಸತ್ತು ತನ್ನ ಸಂಸಾರ ಬದುಕಿಸಿದ ಎಂದ ಕೊರವ.

* * *

—o—



# ಗೃಹಶಾಂತಿ

ನಮ್ಮ ದೇಶದ ಜನರು ಎಂಥ ಮೇಧಾವಿಗಳೆಂದು ಗೊತ್ತಾಗಬೇಕಾದರೆ, ಒಂದು ಸಾರಿ, ಸರ್ಕಾರಿ ಬಸ್‌ನಲ್ಲಿ ತುಂಕೂರಿಗೋ, ಮೈಸೂರಿಗೋ ಪ್ರಯಾಣ ಮಾಡಿದರೆ, ಸಾಕು. ಆಹಾರದ ಉತ್ಪತ್ತಿ, ಕಮ್ಯೂನಿಸಂ ಹಾವಳಿ, ಕಾಶ್ಮೀರದ ಪ್ರಶ್ನೆ, ಮಂತ್ರಿಮಂಡಲದ ಬಿಕ್ಕಟ್ಟು, ಏಕೀಕರಣದ ತೊಡಕು, ವಿದ್ಯಾಭ್ಯಾಸದ ಪುನರ್ರಚನೆ, ಮಳೆಯ ಅವ್ಯವಸ್ಥೆ—ಎಲ್ಲಕ್ಕೂ ಖಡಾಖಂಡಿತವಾಗಿ ಪರಿಹಾರ ಹೇಳುವವರು ಅಲ್ಲಿ ಸಿಕ್ಕುತ್ತಾರೆ. ಈಗ ಈ ಸಮಸ್ಯೆಗಳನ್ನು ಕುರಿತು ಚರ್ಚೆ ಮಾಡುವವರೊಬ್ಬರಿಗೂ ವಿಷಯದ ಪರಿಜ್ಞಾನವೇ ಇಲ್ಲವೆಂಬುದು ಆಗ ಗೊತ್ತಾಗುವುದು. ಆ ಬಸ್ಸಿನಲ್ಲಿರುವ ಪ್ರಯಾಣಿಕರ ಪೈಕಿ ಯಾವ ಒಂಬತ್ತು ಜನರನ್ನಾದರೂ, ಮಂತ್ರಿಗಳಾಗಿ ನಿಯಮಿಸಿದರೆ, ನಮ್ಮ ದೇಶದಲ್ಲಿ ಕೇವಲ ಎರಡೇ ಎರಡು ನಿಮಿಷಗಳಲ್ಲಿ ಸುಭಿಕ್ಷವೂ ಸುಖಸಂತೋಷವೂ ನೆಲೆಸುವುವು ಎಂಬ ಭರವಸೆ ಉಂಟಾಗುವುದು. ಆದರೆ, ನಮ್ಮ ದುರ್ದೈವದಿಂದ, ಈಗಿನವರನ್ನೇ ಕಟ್ಟಿಕೊಂಡು ಒದ್ದಾಡುತ್ತಿದೇವಲ್ಲಾ, ಎಂಬ ಸಂಕಟ ನಮ್ಮನ್ನು ಆವರಿಸಿರುವುದು.

ಈಗ, ಉದಾಹರಣೆಗೆ, ನಾನೇ ಇದೇನೆ. ನನ್ನ ಮೆದುಳಲ್ಲಿ ಹೊಸ ಹೊಸ ಯೋಜನೆಗಳು ಸದಾ ತುಳುಕುತ್ತಲೇ ಇದೆ. ಆದರೆ, ನನ್ನಂಥ ಪ್ರತಿಭಾವಂತನನ್ನ ಕೇಳುವವರೇ ಇಲ್ಲವಾಗಿದೆ. ಇತರರ ಕಷ್ಟಗಳನ್ನು ಹೇಗೆ ನಿವಾರಣೆ ಮಾಡುವುದು, ಎಂಬುದೇ ಹಗಲಿರಳೂ ನನ್ನ ಯೋಚನೆ. ಇದರಿಂದಾಗಿ ನನ್ನ ತಾಪತ್ರಯ ಹೆಚ್ಚುತ್ತಿದ್ದರೂ, ನಾನು ಅದಕ್ಕಾಗಿಯೂ ನನ್ನ ಸೇವಾ ಕೆಲಸವನ್ನು ನಿಲ್ಲಿಸುತ್ತಿಲ್ಲ.

ಮೊನ್ನೆ ನನ್ನ ಮೆದುಳಿಗೆ ಒಂದು ಅಮೂಲ್ಯ ಉಪಾಯ ಹೊಳೆಯಿತು—ಸಂಸಾರದಲ್ಲಿ ಶಾಂತಿ ನೆಲೆಗೊಳಿಸುವುದಕ್ಕೆ. ದಿನ ಬೆಳಗಾದರೆ, ಗಂಡ ಹೆಂಡತಿಯ ಮೇಲೂ, ಹೆಂಡತಿ ಗಂಡನ ಮೇಲೂ ರೇಗಿ ರಾದ್ಧಾಂತ ಮಾಡುವುದು ನಮ್ಮ ಕನ್ನಡ ನಾಡಿನಲ್ಲಿ ಬೆಳೆಯುತ್ತಿದೆ. ಈ ದುರಭ್ಯಾಸವನ್ನು ನಿಲ್ಲಿಸಿ, ಮನೆ ಮನೆಯಲ್ಲೂ ಗೆಲುವಿನ ನಗುವನ್ನು ನಲಿದಾಡಿಸುವುದೇ ನನ್ನ ಉದ್ದೇಶ. ಅದಕ್ಕಾಗಿ ನಾನು ಒಂದು ಸುಲಭೋಪಾಯವನ್ನು ಕಂಡು ಹಿಡಿದಿದೇನೆ.

ನಿಜಕ್ಕೂ, ಕೇವಲ ಸಣ್ಣ ವಿಷಯಗಳಿಗಾಗಿಯೇ, ಗಂಡ ಹೆಂಡಿರಲ್ಲಿ ಮನಸ್ತಾಪ ಮೂಡುವುದು. ಕಾಪಿಗೆ ಬಿಸಿ ಸಾಲದು, ಸಾರಿಗೆ ಉಪ್ಪು ಹೆಚ್ಚು,

ನೆಲದಲ್ಲಿ ನಶ್ಯ ಚೆಲ್ಲಿದಿರಿ, ಮಗುವನ್ನು ಏಕೆ ಅಳಿಸಿದಿರಿ, ಕಾಗದವನ್ನು ಟಪಾಲಿಗೆ ಹಾಕಲಿಲ್ಲ, ಕರಿಬೇವಿನ ಸೊಪ್ಪು ತರಲು ಮರೆತಿರಿ, ಕೂಸಿನ ಸಿಂಬಳ ಒರಸಲಿಲ್ಲ, ಇತ್ಯಾದಿ ಕಿರುಕುಳಗಳು ಬೃಹದಾಕಾರವನ್ನು ತಾಳಿ ಕಾಲಕೂಟದಂತೆ ದಾಂಪತ್ಯವನ್ನು ಉರಿಸಿಬಿಡುತ್ತವೆ. ಮಾತಿಗೆ ಮಾತು, ಕಿಡಿಗೆ ಕಿಡಿ, ತಾಕಿ, ಕೊನೆಗೆ ಹೆಂಡತಿ ಅಳುತ್ತಾ ಕೂರುವುದು, ಗಂಡ ಊಟಮಾಡದೆ ಹೊರಟುಹೋಗುವುದು!

ಇದಕ್ಕೆ ನನ್ನ ಪರಿಹಾರ ಏನು, ಅಂತೀರೋ? ನಾಲ್ಕಾಣೆಗೊಂದು ನೋಟು ಬುಕ್ಕು. "ಬೆಳಗಿನ ಕಾಪಿಗೆ ಬಿಸಿ ಇರಲಿಲ್ಲವೇ? ಇವತ್ತಿನ ಸಾರಿನಲ್ಲಿ ಸಮುದ್ರ ಬೆರೆಸಿದ್ದೇಕೆ? ಕೂಸಿನ ಮುಖ ನೈರ್ಮಲ್ಯವನ್ನು ಏಕೆ ಗಮನಿಸಲಿಲ್ಲ, ಎಂದು ಅದರಲ್ಲಿ ಗಂಡ ಬರೆಯುವುದು. ಸಂಜೆ ಅದರ ಕೆಳಗೆ ಹೆಂಡತಿ, ಉತ್ತರಗಳನ್ನು ಬರೆದಿರುತ್ತಾಳೆ. ಓದಿಕೊಂಡು, ತಪ್ಪಾಯಿತು, ಕಣೆ! ಗೊತ್ತಾಗಲಿಲ್ಲ, ಎಂದು ಅವಳ ಕ್ಷಮೆ ಬೇಡುವುದು. ಹಾಗೆಯೇ, ಹೆಂಡತಿ ಕೂಡ, ಅದೇ ನೋಟು ಬುಕ್ಕಿನಲ್ಲಿ, ನಿಮ್ಮ ಕುರ್ಚಿಯ ಸುತ್ತ ನೆಲದಲ್ಲಿ ಅರ್ಧ ಅಂಗುಲದಷ್ಟು ನಶ್ಯದ ಪುಡಿ ಹರಡುತ್ತೀರಲ್ಲಾ, ಇದು ನ್ಯಾಯವೆ? ನಾನು ಸ್ನಾನಕ್ಕೆ ಹೋದಾಗ, ನೀವು ಮಗುವನ್ನು ಚಿವುಟಿ ಅಳಿಸಿ ನನ್ನನ್ನ ಅವಸರ ಪಡಿಸಿದ್ದು ಧರ್ಮವೆ? ನನ್ನ ತವರು ಮನೆಗೆ ನಾನು ಇನ್ನು ಮೇಲೆ ಕಾಗದವೇ ಬರೆಯಬಾರದೆಂಬುದು ನಿಮ್ಮ ಅಭಿಪ್ರಾಯವೆ? ನಿಮ್ಮ ಕೈಗೆ ಕಾರ್ಡುಗಳನ್ನು ಕೊಡುವುದೇ ತಪ್ಪೆಂದು ತೋರುತ್ತದೆ, ದಾರಿಯಲ್ಲೇ ಟಪಾಲ್ ಪೆಟ್ಟಿಗೆ ಇದ್ದರೂ, ಅದನ್ನ ಅದರೊಳಕ್ಕೆ ತುರುಕುವುದು ನಿಮ್ಮಿಂದ ಸಾಧ್ಯವಾಗುತ್ತಿಲ್ಲವಲ್ಲಾ, ನಾನು ಏನು ಹೇಳಲಿ; ಕರಿಬೇವಿನ ಸೊಪ್ಪಿಲ್ಲದೆ ಅಡಿಗೆ ಮಾಡಬೇಕೆಂಬುದು ನಿಮ್ಮ ಅಭಿಪ್ರಾಯವೋ.... ಎಂದು ಮುಂತಾಗಿ, ಆ ಪುಸ್ತಕದಲ್ಲಿ ಬರೆದಿಡಬಹುದು. ಸಂಜೆ, ಗಂಡ ಬರುತ್ತಲೂ, ಆ ಟೀಕೆಗಳನ್ನೋದಿಕೊಂಡು, ಅವವುಗಳ ಕೆಳಗೆ ಕ್ಷಮಾಪಣೆ ಬೇಡಿ ಉತ್ತರ ಬರೆದು, ಗೃಹಶಾಂತಿಯನ್ನು ಉಳಿಸಿ ತೆಪ್ಪಗಾಗಬಹುದು.

ಹೀಗೆಯೇ, ಅನೇಕ ಸಲಹೆಗಳನ್ನು ದೇಶಕ್ಕೆ ನೀಡಬಲ್ಲ ಮೆದುಳನ್ನು ದೇವರು ನನಗೆ ಅನುಗ್ರಹಿಸಿರುವನಾದರೂ, ನಾನು ಬರಿಯ ಬರಹಗಾರನಾಗಿಯೇ ವೇಚಾಡುತ್ತಿರುವುದು ಕಲಿಯುಗದ ಮಹಿಮೆಯಲ್ಲದೆ ಮತ್ತೇನು?

—ಗಂಗಾಧರ.

—— o ——

# ನಮ್ಮ 'ಲಡಕ್'

---

"ಲಡಕ್" ಎಂತ ಒಂದು ಊರು— ಇದು ತಮಾಷೆ ಅಲ್ಲ. ದಿಟವಾಗಲೂ ಒಂದು ಊರು. ಮೋಡಗಳಿವೆಯಲ್ಲಾ ಅದಕ್ಕಿಂತ ಮೇಲೆ—ಅಲ್ಲಿ ಬರೀ ಮೋಡ, ಹಿಮ, ಛಳಿ, ಕಣ್ಣು ಕೋರೈಸುವ ಕಿರಣ. ಅಲ್ಲಿನ ಜನ ಬಲು ಒಳ್ಳೆಯವರು—ಅಲ್ಲಿಗೆ ನಮ್ಮ ಮುಖ್ಯ ಮಂತ್ರಿ ಪಂ|| ನೆಹ್ರೂ ಅವರು ಹೋಗಿದ್ದಾಗ, ಅಲ್ಲಿನ ಬೌದ್ಧ ಮಂತ್ರಿಗಳು ಇವರಿಗೆ ಅವರ ಉಡುಪು ಇಟ್ಟು, ತಾವೂ ಪಕ್ಕದಲ್ಲಿಟ್ಟುಕೊಂಡು ಫೋಟೋ ಹಿಡಿಸಿಕೊಂಡರು. ನಮ್ಮೂರಲ್ಲಿ ರಿಕ್ಷಾ ಇದ್ದ ಹಾಗೆ—ಅವರೂರಲ್ಲಿ ಯಾಕ್ ಎಂಬ ಒಂದು ಪ್ರಾಣಿ ಇದೆ. ಹೊರುಕ್ಕೆ ಅದೇ ಅಲ್ಲಿ ಚೆನ್ನು.

* * *

"ಹೋಗಣ್ಣಾ! ಕತೆ ಹೇಳು ಅಂದರೆ ಏನೇನೋ ಹೇಳುತ್ತೀ? ರಂಗಜ್ಜೀನೆ ವಾಸಿ ಕಾಗಕ್ಕಾ ಗುಬ್ಬಕ್ಕ, ರಾಜಕುಮಾರ, ದರ್ಜಿ, ಇಂತೋರ ಕತೆ ಎಲ್ಲಾ ಎಷ್ಟು ಚೆನ್ನಾಗಿ ಹೇಳ್ತಾಳೆ. ನೀನೇನೋ ಲಡಕ್ ಅಂತೆ ಧಡಕ್ ಬಡಕೊ ಬೇಕು" ಎಂತ ಹೇಳಿ ಮಕ್ಕಳೆಲ್ಲಾ ಅಡಿಗೇ ಮನೆ ಕಡೆ ಓಡಿದುವು.

* * *

, ಮಳೆ ಬಂದ ಭಾನುವಾರ ಸಾಯಂಕಾಲ. ಮಾಡುಕ್ಕೇನೂ ತೋಚದೆ, ಮಕ್ಕಳಿಗೆ ಕತೆ ಹೇಳಿ ಮೆಚ್ಚಿಸೋಣ. ಹಾಗೂ ಅವಕ್ಕೆ ನಮ್ಮ ದೇಶದ, ವರ್ತಮಾನ ಕಾಲದ ಜ್ಞಾನವನ್ನುಂಟು ಮಾಡೋಣ. ಆ ಫ್ರಾಯ್ಡ್, ಯೂಂಗ್, ಇವರೆಲ್ಲಾ ಹೇಳಿಲ್ಲವೇ ಆ ತೆರಹ—"ಮನುಜನಿಗೆ ಮಗು ತಂದೆ"—ಇದೆಲ್ಲಾ ಓದಿ ನಾನು ಇವರಿಗೆ ಕತೆ ತರಹ ಬುದ್ಧಿ ಹೇಳೋಣ, ಜ್ಞಾನ ಅರಿವು ಕಲಿಸೋಣ ಅಂತ ಕಷ್ಟಪಟ್ಟು ಕತೆ ಹೇಳಹೊರಟರೆ ಇದೇ ನೋಡಿ ಗತಿ! ಐದು ನಿಮಿಷಾನೂ ಮಕ್ಕಳು ಹತ್ತಿರ ಕೂಡೋದಿಲ್ಲ. ನಾನು ಹೇಳಿದ್ದೂ ಕೇಳೋದಿಲ್ಲ. ನಮ್ಮ ರಂಗಜ್ಜಿ ಹತ್ತಿರ ಓಡಿಹೋಗುತ್ತವೆ.

ಮಳೆ ಬಂದ ಭಾನುವಾರ ಹೇಗೆ ಕಾಲ ಕಳೀಲಿ—ಐವತ್ತರ ಪ್ರಾಯಕ್ಕೆ ಬಿದ್ದ ನಾನು.—ಸರಿ! ನಾನೂ ಅಡಿಗೇ ಮನೆಗೆ ಹೋಗಿ ರಂಗಜ್ಜಿ ಕತೇನ ಕೇಳ್ತೀನಿ.—ಹಾಗೂ ಕೇಳಿ ಬಹಳ ದಿನಗಳಾಯ್ತು!

—ಸೋಮು.

---

# " ಖಾಂಧಾರೀ ವ್ಯಾಪಾರ "

---

ಎಂಟು ಮೊಳದ ಬಿಳೀ ಮಗ್ಗಲು ಹಾಸಿಗೇಲಿ ಚೊಳ್ಳ ಹೊಲೆಸಿಕೊಂಡು, ಕಣ್ಣಿಗೆ ಕಾಡಿಗೆ ಇಟ್ಟುಕೊಂಡು, ಕತ್ತಿಗೆ ಒಂದು ತಾಯ್ತಿ, ಸೊಂಟಕ್ಕೊಂದು ಸಣ್ಣ ಕತ್ತಿ ಕಟ್ಟಿಕೊಂಡು, ಮನೆ ಮನೆಗೂ ಸಾಮಾನು ಮಾರುಕ್ಕೆ ಬರುತ್ತಾರಲ್ಲಾ ಖಾಂಧಾರೀಗಳು—ಅವರ ಪರಿಚಯು ಮೊನ್ನೆ ನನಗೆ ಆಗಿದ್ದು.

ಬೆಳಿಗ್ಗೆ ಹತ್ತು ಗಂಟೆ ಆಗಿರಬಹುದು. ಯಾರಾದರೂ ಈ ವಿಮೆ ಬೇಟೆಗೆ ಆಹುತಿ ಸಿಗುತ್ತಾರೋ ಎಂದು ಹೊರಡುವುದರಲ್ಲಿದ್ದೆ. ಬಾಗಿಲ ಹತ್ತಿರ ಬಂದು ನಿಂತ ಸೈಂಧವ. ಹತ್ತಾರು ತರಹ ಚಾಕುಗಳನ್ನು ಒಂದು ಸರಮಾಡಿ ಕೈಗೆ ತಗಲುಹಾಕಿಕೊಂಡಿದ್ದ. ಒಂದೊಂದೂ ಒಂದೊಂದು ನಮೂನೆ. "ಲೇವ್ ದೇಕೋ" ಅಂತ ಎಲ್ಲಾ ತೋರಿಸಿದ. ಅದರಲ್ಲೊಂದು ಕಾಮನ ಬಿಲ್ಲಿನ ಹಾಗಿತ್ತು. ತವರದಲ್ಲೇ ಅದನ್ನು ಮಾಡಿದ್ದರು ಅಂತ ನನ್ನ ಖಾತರಿ, ಅದೂ ಜಪಾನಿನಲ್ಲೇ ಮಾಡಿದ್ದಿರಬೇಕು. ನೋಡುಕ್ಕೆ ಚೆನ್ನು, ಮಕ್ಕಳಿಗೂ ಇದರಿಂದ ಅಪಾಯ ಆಗಲಾರದು ಎಂದು ಅದನ್ನು ಕೈಗೆ ತೆಗೆದುಕೊಂಡೆ. ಕೈಗೆ ತೆಗೆದು ಕೊಂಡರೆ ಬೆಂಡಿನ ಹಾಗಿತ್ತು. ಎಲ್ಲೋ ಈ ತವರಕ್ಕೆ ಹೊಟ್ಟೆಗೇ ಇಲ್ಲ. ಇದೆಲ್ಲೋ ಬ್ರಾಹ್ಮಣ ತವರ ಇದರಿಂದ ಈ ಚಾಕು ಮಾಡಿದ್ದಾರೋ ಎಂದು ಕೊಂಡೆ. ಅದಕ್ಕೋಸ್ಕರವೇ ಇದರ ಬೆಲೆಯೂ ಸುಲಭ ಇರಬಹುದು ಎಂದು ಕೊಂಡೆ.

"ಕ್ಯಾತ್ತಾ ? " ಎಂದೆ.

"ಏಕ್ ಸೌ ರೂಪಾಯಿ" ಅಂದ.

"ಸೌ" ಅಂದರೆ ಗೊತ್ತೆ ಅವನ ಹಾಳು ಭಾಷೇಲಿ—ಒಂದು ನೂರು ಅಂತ.

ಹೊಟ್ಟೆಗಿಲ್ಲದ ತವರದಲ್ಲಿ ಮಾಡಿದ ಸಣ್ಣ ಚಾಕೂಗೆ ಒಂದು ನೂರು ರೂಪಾಯಿ ! ! !

ನಾನಂದು ಕೊಂಡೆ—ನೂರು ರೂಪಾಯಿ ಕೇಳಿದವನ ಹತ್ತಿರ ನಾನೂ ಒಂದು ರೂಪಾಯಿ ಅಂದರೆ ಅವನೇ ಗಂಟು ಮೂಟೆ ಕಟ್ಟಿಕೊಂಡು ಖಾಂಧಾರಿಗೆ ಓಡಿಹೋಗುತ್ತಾನೆ ಅಂತ.

"ಏಕ್ ರೂಪಾಯ್" ಅಂದೆ.

ಅವನೇನಂದ ಗೊತ್ತೆ "ಲೇವ್"—

ಅವನ ಸೊಂಟದಲ್ಲಿದ್ದ ಕತ್ತಿ ನೋಡಿದೆ—ನಮ್ಮನೆಯಿಂದ ಪೋಲೀಸ್ ಸ್ಟೇಷನ್ನಿಗೆ ಎರಡು ಮೈಲಿ ದೂರ.—ಆ ಪೋಲೀಸ್ ಸ್ಟೇಷನ್ನಿನಲ್ಲೂ ನಮ್ಮ ಪುಳ್ವಾರ್ ಪೋಲೀಸಿನವರೇ !

ಬಾಯಿ ಮುಚ್ಚಿಕೊಂಡು ರೂಪಾಯಿತೆತ್ತು ಆ ಜಪಾನೀ ಮೂರಾಣೆ ಚಾಕೂನ ಒಂದು ರೂಪಾಯಿ ಕೊಟ್ಟು ಕೊಂಡುಕೊಂಡೆ—ಆಗಲೇ ನನಗೆ "ಖಾಂಧಾರೀ ವ್ಯಾಪಾರ"ದ ಮರ್ಮ ತಿಳಿದಿದ್ದು.

* * *

ಕಾಲ ಬಿಗಡಾಯಿಸಿತು. ಮೌಂಟ್‌ಬ್ಯಾಟನ್ ಗಂಟು ಮೂಟೆ ಕಟ್ಟಿದ 'ಹರೇ ರಾಮ್' ಅಂದರು ಬಾಪು. ಅಕ್ಕಿ ರೇಷನ್ ಆಯಿತು. ಬೇಳೆ ಬಾರ್ಸೀಲಿ ನಿಂತು ಹೋಯ್ತು. ಜೀವನೋಪಾಯ ಅಂದರೆ ಜೀವನಕ್ಕೆ ಅಪಾಯ ಅಂತ ಸಮಾಸ ಮಾಡಲು ಶುರು ಮಾಡಿತು ಜನತೆ.

ಆಗಲೇ ನನಗೆ ಅರ್ಥವಾಯಿತು. ಈ ವಿಮಾ ಕೃಷಿ ಇನ್ನುಮೇಲೆ ಸಾಗುಲ್ಲ. ರಾಜಕೀಯವೇ ಗತಿ ಅಂತ.

ನನ್ನೂರು ತಿರುತಿರುಪಲ್ಲಿ. ಅಲ್ಲಿನ ಖಾದಿ ಮುಖಂಡನ ಹತ್ತಿರ ಒಂದು ಪ್ರಶಸ್ತಿ ಪತ್ರ ಪಡೆದು ತಾಲ್ಲೂಕು ಮುಖಂಡನನ್ನು ನೋಡಿದೆ. ಆ ಮುಖಂಡ ನಿಗೆ ತಿರುತಿರುಪಲ್ಲಿಯಿಂದ ನಾಲ್ಕು ವೋಟು, ಕೆಟ್ಟುಹೋಯ್ತು ಕಾಲ! ನಾಲ್ಕು ಓಟು ಅಂದರೆ ಸಾಮಾನ್ಯವೇ! ಆತ ನನಗೊಂದು ಪ್ರಶಸ್ತಿ ಪತ್ರ ಕೊಟ್ಟ. ಅದನ್ನು ಚಿರುಚಿರುವಟ್ಟಂ ಡಿಸ್ಟ್ರಿಕ್ಟ್ ಮುಖಂಡನಿಗೆ ಕೊಟ್ಟೆ. ಆತನಿಗೆ ಇವು ಗಳಿಂದ ಮೂವತ್ತಾರು ಓಟು! ಯಾರಿಗುಂಟು! ಯಾರಿಗಿಲ್ಲ! ಆತ ಒಂದು ಪತ್ರಕೊಟ್ಟ.—ಅದನ್ನು ಪಟ್ಟಣಕ್ಕೇ ತೆಗೆದುಕೊಂಡು ಹೋದೆ. ಅಲ್ಲಿ ಆ ಪತ್ರಕ್ಕೆ ನೂರರಲ್ಲಿ ಹತ್ತರಷ್ಟು ಓಟು!!

ಆತ ಸವಿನಯವಾಗಿ ನನ್ನನ್ನು ದಿವಾನ್ ಖಾನೇಲಿ ಕೂರಿಸಿ ಕುಶಲ ಪ್ರಶ್ನೆ ನಡೆಸಿದ.

"ಏನು ಬೇಕು" ಅಂದ. ಆ ಅರ್ಥ ಸರ್ವಾಧಿಕಾರಿ—

* * *

ಆಗಲೇ ನನಗೆ ಖಾಂಧಾರಿ ಜ್ಞಾಪಕ ಬಂದಿದ್ದು—ಅವನ ವ್ಯಾಪಾರದ ಮರ್ಮ ಅರ್ಥವಾಗಿದ್ದು.—

*  *  *

"ಜಮೀನ್ದಾರಿ ಬೇಕು" ಅಂದೆ! ಅರ್ಥ ಸರ್ವ ಅಧಿಕಾರಿ ಅಂದ. "ಜಮೀನ್ದಾರಿ ತೆಗೆದು ಹಾಕುತ್ತಿದ್ದೇವೆ ಅದು ಕೊಡಲು ಸರ್ವಾಧಿಕಾರಿಗೂ ಅಸಾಧ್ಯ. ಕಡೆಗೆ ಗಾಂಧೀಜೀಯೇ ಎದುರಿಗೆ ಬಂದರೂ ಸಾಧ್ಯವಿಲ್ಲ. ಅದು ಬೇಡ. ಅದರ ಬದಲು ಎರಡು "ಪೆಟ್ರೋಲ್ ಬಂಕ್"ಗೆ ಪರ್ಮಿಟ್ ಕೊಡುತ್ತೇನೆ" ಅಂದ.

ಈಗ ಸುಖವಾಗಿ ತಿಂಗಳಿಗೆ ಸಾವಿರ ಸಂಪಾದಿಸಿಕೊಳ್ಳುತ್ತೇನೆ ಶ್ವೇತಮಾರು ಕಟ್ಟೆಯಲ್ಲಿ—ಇಂಗಿಹೋದ ಪೆಟ್ರೋಲು ಅಂತ ಕಾಳಮಾರು ಕಟ್ಟೆಯಲ್ಲಿ ಯಥಾನುಶಕ್ತಿ !

—ಶಕುನಿ.

---



ಸೌದೆ ಕ್ಯೂನಲ್ಲಿ ಕಾಯೋಬದಲು
ನಮ್ಮ ನಮ್ಮ ಸೌದೆ ನಾವೇ ಬೆಳೆಸಿದರೆ ಬೇಗ ಸಿಗುತ್ತೆ ಅಂತ !

# ಗೃಹ ಸೌಕರ್ಯ

"ಅಂಬುಜ ಊರಿಗೆ ಬಂದಿದಾಳೆ ಕಣೆ...."

"ಹೌದೇನು! ಎಲ್ಲಿದಾಳೆ .ಮನೆ ಸಿಕ್ತಂತೇನು ಅವಳ ಯಜಮಾನ್ರಿಗೆ .. "

" ಇಲ್ಲೆ ಬಸವನಗುಡಿಲೇ ಮನೆ—ಮೊನ್ನೆ ರೇರ್ಷ ಷಾಪಿಗೆ ಚೀಲ ಹಿಡಿದು ಬಂದಿದ್ದಳು ..."

"....ಬಸವನಗುಡೀಲೆಲ್ಲಿ?....ಅವಳ ಮನೆ ನೋಡಬೇಕು ಕಣೆ, ಹೈಸ್ಕೂಲಲ್ಲಿದ್ದಾಗ ಜಂಭ ಹೊಡಿತಿದ್ದಳಲ್ಲ ಹೂವಿನ ಕೂಜ.. .ಬೆಡ್‌ರೂಮು—ಡೈನಿಂಗ್ ರೂಮು—ಕಾರು ಗ್ಯಾರೇಜಾಂತ ಕನಸು ಕಾಣ್ತಿದ್ದಳಲ್ಲ. ನೋಡಬೇಕಲ್ಲೆ ಅವಳ ಮನೇನ....ಚೆನ್ನಾಗಿದೆ ಏನೆ ಅವಳ ಮನೆ ...?"

"....ದಿವಿನಾದ ಮನೆ ಕಣೆ ಪುಣ್ಯವಂತೆ ಅಂಬುಜ.. ಎರಡು ರೂಮು ಉಗ್ರಾಣ ...ನಡುಮನೆ ವರಾಂಡ....ಡ್ರೆಸ್ಸಿಂಗ್ ರೂಮು. ಅಡಿಗೆ ಮನೆ..... ದೇವರ ಮನೆ ...ಗ್ಯಾರೇಜು ಕಾರು...."

"....ಹೊಟ್ಟೆ ಉರಿಯುತ್ತಲ್ಲೆ ಅವಳ ಜಂಭಕ್ಕೆ ತಕ್ಕ ಹಾಗೆ ದೇವರು ನಡೆಸ್ತಾನಲ್ಲ....ಬಾಡಿಗೆ ಎಷ್ಟೆ ."

"ಅವರ ಪುಣ್ಯ .. ಕೇವಲ ಹದಿಮೂರು ರೂಪಾಯಿ ಬಾಡಿಗೆ "

"ನಾ ನಂಬೋಲ್ಲ ಕನಸೇನೆ ನಿನಗೆ ಮೈಲಿ ಹುಷಾರು ತಾನೆ—ಎಚ್ಚರವಾಗಿದ್ದಿಯಾ ! . ."

"ಇಲ್ದೆ ಏನಂತೆ...ಅವಳೇ ತೋರ್ಸಿದಳು ನನಗೆ ಆದರೆ ಆ ಮನೇಲಿ ಮತ್ತೊಂದು ಅನುಕೂಲ ನೋಡು .. ಮೇಲೆ ಹೇಳಿದೆನಲ್ಲಾ ಸೌಕರ್ಯಗಳು.... ಅದೇ ಕೂಜು ಬೆಡ್‌ರೂಮು ಇತ್ಯಾದಿ .. ಅದೆಲ್ಲಾ ಗ್ಯಾರೇಜಿನಲ್ಲೆ ಇದೆ ನೋಡು ಬಿಡಿಸಿ ಬಿಡಿಸಿ ಅವಳೇ ತೋರ್ಸಿದಳು—ಕಾರೂ ಇತ್ತು ಅವಳ ಮಗನ ಕೈಲಿ. ಸಮಸ್ತವೂ ಅಲ್ಲೇ ಇದೆ ...ನೋಡ್ದ್ಯಾ ಹೇಗಿದೆ ಗೃಹಸೌಕರ್ಯ....ಹ್ಹ ಹ್ಹ.... ಹ್ಹ... ನೋಡಿದೆಯಾ ! ! !.. ."

"ಹ್ಹ ಹ್ಹ .. ಬಹಳ ಚೆನ್ನಾಗಿ ಹೇಳ್ದಿ ಕಣೆ....ಪಾಪ"

—ದಾಶರಥಿ ದೀಕ್ಷಿತ್.

—— o ——

# “ಸತ್ಯವಂತೆ, ಸತ್ಯ!”

---

“ಸತ್ಯ! ಅಂತೆ ಸತ್ಯ!—ಎಲ್ಲಾ ಶುದ್ಧ ಸುಳ್ಳು”

ಅಂತ ಕೂಗುತ್ತಾ ನಮ್ಮ ಶಾಸ್ತ್ರಿ ಆ ದಿನ ಕ್ಲಬ್ಬಿಗೆ ಬಂದ. ಬಲ ಕೆನ್ನೆ ಬಾತಿದೆ. ಬಲಗಣ್ಣ ಕೆಳಗೆ ಕಪ್ಪು ಹೆತ್ತಿಕಟ್ಟಿದೆ. ಬಲಗಣ್ಣು ಅರೆಗಣ್ಣಾಗಿದೆ. ಈ ಶಾಸ್ತ್ರೀನ ಈ ಅಲ್ಪ ಪ್ರಾಣಾನ್ನ ಯಾರಪ್ಪಾ ಹೀಗೆ ಅಪ್ಪಳಿಸಿ ಹೊಡೆದವರು? ಇವನೇನು ಇನ್ನೊಬ್ಬರ ಗೋಜಿಗೆ ಹೋಗುವವನಲ್ಲ. ಲೋ! ಎಂದು ಕರೆದರೆ ಕೂಡಲೆ ಕೈ ಜೋಡಿಸಿ ನಮಸ್ಕಾರ ಮಾಡುವ ಜಾತಿ. ಇವನು ಯಾರ ಹತ್ತಿರ ಏಟು ತಿಂದ?

ಇವೇ ಸಮಸ್ಯೆಗಳು ನಮಗೆಲ್ಲಾ ಒಮ್ಮೆಲೇ ತೋಚಿದುವು. “ಯಾರೋ ಶಾಸ್ತ್ರಿ ಹೀಗೆ ಮಾಡಿದ್ದು? ಯಾಕೋ?” ಎಲ್ಲರೂ ಒಟ್ಟಿಗೆ ಕೇಳಿದೆವು.

“ಸತ್ಯ ಅಂತೆ ಸತ್ಯ! ನೋಡಿ! ನಿನ್ನೆ ಸಾಯಂಕಾಲ ಜಂಗಳೂರು ಜಮೀನ್ದಾರ ಹೇಳಿಕಳಿಸಿದ್ದ. “ನೀವೇನೇನ್ರಿ ಹೊರಾರತ್ನ ಶಾಸ್ತ್ರಿ” ಎಂದ. “ಹೌದು ಎಂದೆ.” “ಹಾಗಾದರೆ ನನ್ನ ಕೈ ನೋಡಿ. ನಾಳೆ ಯಾವ ಕುದುರೆ ಗೆಲ್ಲುತ್ತೆ” ಅಂದ. ನಾನು ಅವನ ಅಂಗೈಗೆ ಮಂಕು ಬೂದಿ ಎರಚಿ ಅದರ ನಕ್ಷೆ ತೆಗೆದುಕೊಂಡೆ. ಅವನ ಅದೃಷ್ಟ ರೇಖೆ ಚಂದ್ರನ ಗುಡ್ಡದಿಂದ ಹೊರಟಿತ್ತು. ಭಲೆ ಭೇಷ್ ಎಂದುಕೊಂಡೆ—ಅದಕ್ಕೊಂದು ಸಹರೇಖೆ ಜೀವನ ರೇಖೆಯಿಂದ ಬಂದಿತ್ತು. ಸರಿ ಸೊಗಸು ಎಂದುಕೊಂಡೆ. ಗುಣಾಕಾರ ಹಾಕಿದೆ. “ಸ್ವಾಮಿ” ಎಂದೆ. “ಜೀವನ ಚಂದ್ರ” ಎಂಬ ಕುದುರೆ ಮೇಲೆ ಆಡಿ ಖಂಡಿತ ಲಕ್ಷ್ಮಿ ಒಲಿಯುತ್ತಾಳೆ ಎಂದೆ. “ಆ ಹೆಸರಿನ ಕುದುರೆಯೇ ಇಲ್ಲವಲ್ಲ” ಅಂದ. ಹಾಗಾದರೆ ಲಕ್ಷ್ಮಿ ಮೇಲೆ ಆಡಿ ಜೀವನ ಚಂದ್ರ ಒಲಿಯುತ್ತಾಳೆ ಅಂದೆ—ಲೋಕಾಭಿರಾಮವಾಗಿ—

ಆಗಲೇ ನೋಡಿ ಜಮೀನ್ದಾರ ಅಪ್ಪಳಿಸಿ ನನ್ನ ಬಲಗೆನ್ನೆಗೆ ಹೊಡೆದ.

ಜಮೀನ್ದಾರನ್ನ ನೋಡಿದ್ದೀರಲ್ಲ. ಕುದುರೆ ಬೆಳೆದ ಹಾಗೇ ಬೆಳೆದಿದ್ದಾನೆ; ಕತ್ತೆ ತಿಂದ ಹಾಗೆ ತಿನ್ನುತ್ತಾನೆ. ಹೇಸರ ಕತ್ತೆ ಒದ್ದಹಾಗೆ ಹೊಡೀತಾನೆ. ನಾನು ನಕ್ಷತ್ರ ಎಣಿಸಿ ಗುಣಾಕಾರ ಹಾಕೋನು ಆ ಪೆಟ್ಟಿಗೆ ಇಷ್ಟಕ್ಕಿಂತ ಹೆಚ್ಚು ಅಪಾಯ ಆಗದೇ ಇದ್ದದ್ದು ಪುಣ್ಯ. ಹೊರಗೆ ಮುಗ್ಗರಿಸಿದಾಗ ಅವರ ಜವಾನ

ತಲೆಗೆ ತಣ್ಣೀರು ತಟ್ಟಿ ಹೇಳಿದ. "ಸ್ವಾಮಿ ಜೋಯಿಸ ಹೇಳೋರು, ಹಾಗೆಲ್ಲಾ "ಸತ್ಯ" ಹೇಳ್ತಾರೆಯೇ ಎಲ್ಲರೆದುರಿಗೂ ಸ್ವಲ್ಪ ಕುದುರೆ ಬುದ್ಧಿ ಉಪಯೋಗಿಸಿ ಸಮಯ ನೋಡಿ ಕೆನೆಯ ಬೇಕೇ ಹೊರತು ಆ ಜೀವನ ಚಂದ್ರಳ ಸ್ನೇಹಿತ ರಾಮಾಚಾರಿ ಎದುರಿಗೇ ಇದ್ದಾಗ, ಹಾಗೆ ಹೇಳಬಹುದೇ. ಲಕ್ಷ್ಮಿ, ಜೀವನ ಚಂದ್ರಳ ತಾಯಿ. ಜಮೀನ್ದಾರರು ಈಗ ಆಕೇನ ಸರಿಮಾಡಿಕೊಳ್ತಾ ಇದಾರೆ. ಜ್ಯೋತಿಷ್ಯರಿಗೆ ಎಲ್ಲಾ ಗುಟ್ಟೂ ರಟ್ಟಾಗಿರಬಹುದು. ಆದರೆ ಹಾಗೆ ಹೇಳ ಬಹುದೇ?"

ಯಾವ ಹೋರಾಶಾಸ್ತ್ರದಲ್ಲಿ ಹೇಳಿದೇರಿ ಇದೆಲ್ಲಾ? ಜೀವನ ಚಂದ್ರ ಅಂತ ಯಾವ ತರುಣೀಮಣಿ ಹೆಸರಿಟ್ಟುಕೊಳ್ಳುತಾಳ್ರೀ?

ಅದಕ್ಕೇ ಈ "ಸತ್ಯ" ಎಲ್ಲಾ ಶುದ್ಧ ಸುಳ್ಳು. ಕೈರೇಖೆ ತೋರಿಸಿದರೂ, ನಾವು ಹಣೆ ರೇಖೆ ನೋಡಿ ಶಾಸ್ತ್ರ ಹೇಳಬೇಕು" ಎಂದ. ಹೋರಾರತ್ನ ಶಾಸ್ತ್ರಿ.

ಅಷ್ಟೆಲ್ಲಾ ಕೈ ರೇಖೇಲಿ ಗೊತ್ತಾಗುತ್ತ್ಯೆ ಶಾಸ್ತ್ರಿ? ಎಂದು ನಾವೆಲ್ಲಾ ಅಂಗೈ ನೀಡಿದೆವು ಅವನ ಕಡೆಗೆ.

—ಕುಮಾರ.

—o—



# ಹಿಂದಿನ ದುಃಖ

—೦—

ಯಾವ ಶಾಲಾ ವಾರ್ಷಿಕೋತ್ಸವಕ್ಕಾದರೂ ಹೋಗಿ, ಭಾಷಣಕಾರರು ತಮ್ಮ ಹಿಂದಿನ ಶಾಲಾ ದಿನಗಳನ್ನು ನೆನೆದು ಆನಂದಪಡುತ್ತಿರುತ್ತಾರೆ. ಯಾವ ಮನೆಗಾದರೂ ನುಗ್ಗಿ, ತಂದೆಯಾದವನು ಹುಡುಗರ ಮುಂದೆ ತನ್ನ ಬಾಲ್ಯದ ಆಟಪಾಟಗಳನ್ನು ಹೊಗಳಿ ಹೊಟ್ಟೆ ಉರಿಸುತ್ತಿರುತ್ತಾನೆ. ಇದನ್ನು ಕೇಳಿ, ಅವರು ಹೇಳುವುದೆಲ್ಲ ನಿಜ, ಎಂದು ಭಾವಿಸಬೇಡಿ, ಸದ್ಯಃ ಈಗಿನ ನಮ್ಮ ಗೋಳುಗಳೆಲ್ಲ ಆಗಿನವರಿಗಿರಲಿಲ್ಲವಲ್ಲಾ, ಎಂದು ನೊಂದುಕೊಳ್ಳಬೇಡಿ. ಆಗಿನ ಕಾಲದಲ್ಲೂ, ತುಂಬಾ ತಾಪತ್ರಯ ಇತ್ತು. ಆದರೆ, ದೂರದ ಬೆಟ್ಟ ನುಣ್ಣಗೆ; ದೂರದ ಪೆಟ್ಟು ತಣ್ಣಗೆ !

ಹಿರಿಯರಿಬ್ಬರು ಎದುರು ಬದುರು ಸಿಕ್ಕರೆ, ಹಿಂದಿನ ದಿನಗಳನ್ನು ನೆನೆದು ಕೊಳ್ಳುತ್ತಾರೆ. ಚಚ್ಚಿ ಚಚ್ಚಿ ಚರ್ಮ ಸುಲಿದ ಮೇಸ್ಟರುಗಳು, ನಡೆದು ನಡೆದು ಸುಸ್ತಾದ ದಾರಿಗಳು, ಸೇದಿ ಸೇದಿ ಬತ್ತಿಹೋದ ಬಾವಿಗಳು, ಬೈದು ಬೈದು ಬೆವರಿಳಿಸಿದ ಸಾಹೇಬರುಗಳು, ಎಲ್ಲ ಮಾತಿಗೆ ಸಿಕ್ಕುತ್ತವೆ. ಆದರೂ, "ಅಂತು.... ಪಾಪ....ಅಷ್ಟು ಕೆಟ್ಟವರೇನೂ ಅಲ್ಲ... ಚೆನ್ನಾಗೆಯೇ ಇತ್ತು....ಖುಷಿಯಾಗಿಯೇ ಇದ್ದೆವು.. .ಅಂಥ ಕಾಲ ಇನ್ನು ಬರೋಲ್ಲ ...ಸ್ವರ್ಗ ಕಾಣ್ರಿ...." ಎಂದು ನಾಲಗೆ ಚಪ್ಪರಿಸುತ್ತಾರೆ. ಕಾಲವಾಹಿನಿಯ ಮಹಿಮೆ ; ಮರವೆಯ ತರವೇ ಅಂಥದ್ದು.

ಇವತ್ತು ಬೆಳಗ್ಗೆ ಬಸ್ಸಲ್ಲಿ ಸೀಟಿಲ್ಲ ಅಂತ ಕೈಯಾಡಿಸಿದ ಆ ಕಟುಕ ಕಂಡಕ್ಟರ ಮೇಲೆ ರೇಗಿ ಅವನ ಕಡೆ ಅಚ್ಚ ಕನ್ನಡದ ಕೊಚ್ಚೆಯನ್ನೆಸೆದದ್ದನ್ನು ಐದು ವರ್ಷದ ಅನಂತರ ನೆನೆದುಕೊಂಡರೆ, ನಿಮಗೆ ನಗು ಬರುತ್ತದೆ. ಅಥವಾ ನಿನ್ನೆ ಸಾಯಂಕಾಲ ತುಮಕೂರು ರಸ್ತೇಲಿ ಲಾಯರ್ ತಮ್ಮಯ್ಯನವರು ಸಿಕ್ಕಿ, "ಬನ್ರಿ, ಒಂದು ಡ್ರೈವ್ !" ಎಂದು ಕೂಗಿ ನಿಮ್ಮನ್ನೂ ಕೂರಿಸಿಕೊಂಡು ಕಾರೋಡಿಸಿದಾಗ, ದಾರಿಯಲ್ಲಿ ಪೆಟ್ರೋಲ್ ಮುಗಿದು, ಮೂರು ಮೈಲಿ ಉದ್ದಕ್ಕೂ ಆ ಹಾಳು ವಾಹನವನ್ನು ದಬ್ಬಿದ್ದು....ಈಗಲೂ ರೇಗುತ್ತಾ ಇದೆ ಅಲ್ಲವೆ? ಮೂರು ವರ್ಷ ಕಳೆಯಲಿ! ನೀವೇ ಕತೆಗೆ ಕಸೂತಿ ಕೆಲಸಮಾಡಿ ಕ್ಲಬ್ಬಲ್ಲಿ ಹೇಳಿ, ಯಾರೂ ನಗದಿದ್ದರೂ, ನಕ್ಕು ಪೆಚ್ಚಾಗುವಿರಿ !

ಅಲ್ಲಾ! ಎಂಥಾ ಅವಿವೇಕ ಇದು ! ಇವತ್ತು ದುಃಖ ತರುವ ಸನ್ನಿವೇಶ, ನಾಳೆ ಸುಖ ಕೊಡುತ್ತದೆ. ಹಾಗಾದರೆ, ಅದನ್ನ ಇವತ್ತೇ ಸುಖ ಅಂತ ಏಕೆ

ಸವಿಯಬಾರದು, ಅಂತೀನಿ. ಬಿಸಿಲಿನ ತಾಪ ಹೆಚ್ಚಾಗಿದ್ದಾಗ, ಅದನ್ನು ಶಪಿಸುವುದು; ಮಳೆ ಬಂದು ಕೊಂಚ ತಂಪು ಕಂಡರೆ ಸಾಕಪ್ಪ, ಹಾಳು ಶಖೆ; ಮೈ ಎಲ್ಲ ಉರಿ; ತಣ್ಣಗೇನಾದರೂ ಕುಡಿಯೋದಕ್ಕಿದ್ದರೆ ಬೇಕಪ್ಪ" ಅಂತ ಒದ್ದಾಡುವುದೇನು? ಮಳೆ ಬಿದ್ದು ಒದ್ದೆಯಾಗಿ ಚಳಿ ಕೊರೆಯುತ್ತಿದ್ದಾಗ, "ಹಾಳು ಚಳಿ, ಮೈ ಎಲ್ಲ ನಡುಕ, ಬಿಸಿಲು ಬಂದು ಕೊಂಚ ಕಾವು ಕಂಡರೆ ಸಾಕಪ್ಪ, ಬೆಚ್ಚಗೇನಾದರೂ ಕುಡಿಯೋಣವೆಂದರೆ, ಕಾಂಗ್ರೆಸ್ ಸರ್ಕಾರ"— ಅಂತ ಕಣ್ಣೀರಿಡುವುದೇನು? ಬಿಸಿಲು ಕಾಲವನ್ನು ಚಳಿಗಾಲದಲ್ಲೂ ಚಳಿಗಾಲವನ್ನು ಬೇಸಿಗೆಯಲ್ಲೂ ನೆನೆದು ಅಳುವುದಕ್ಕಿಂತ, ಆಯಾ ಕಾಲಕ್ಕೆ ಅದದೇ ಚೆನ್ನ ಅಂತ ಪ್ರತಿಗಳಿಗೆಯಲ್ಲೂ ಹರ್ಷವಾಗಿರೋದಲ್ಲವೆ, ಚೆನ್ನ?

—o—




ಗಾದೆ ಜ್ಞಾಪಕಕ್ಕೆ ಬರುತ್ತೆ.

# ಇದು ಧರ್ಮವೆ?

—o—

ಎನ್ನ ಸರ್ವಾಂಗವನು ನಿನ್ನ ರಥ ನೂಕಲ್ಕೆ
ಚೆನ್ನಾಗಿ ಸಲಿಸುವೆನು, ಸರ್ಕಾರವೇ | ಪ ||

ಎನ್ನ ಹೃದಯವು ನಿನಗೆ | ಇನ್ನಿಲ್ಲ ಮುಡಿಪಯ್ಯ
ಎನ್ನ ನಖ ಶಿಖಾಂತ | ನಿನಗರ್ಪಿತ ||

ಎನ್ನ ಜ್ಞಾನವು ನಿನಗೆ | ಉನ್ನತದ ಉಪಕರಣ
ಎನ್ನ ಸಂಚಾರವೇ | ಪರದಕ್ಷಿಣೆ ||

ಎನ್ನ ಕಿವಿಗಳೋ ನಿನ್ನ | ತೆಗಳುವಾ ನುಡಿಗಳಿಗೆ
ಮನ್ನಣೆಯ ಕೊಡದೆಯೇ | ಕಿವುಡು ನಟನೆ ||

ಎನ್ನ ತೋರಿಕೆ ಉಡಿಗೆ | ನಿನ್ನ ಮಾನವನುಳಿಸಿ
ಚೆನ್ನ ಎಂದೆನಿಪುದಕೆ | ಮೆರೆದಿರ್ಪುದು ||

ಎನ್ನ ಜಿಹ್ವೆಯು ನಿನ್ನ | ಸ್ತೋತ್ರದಲ್ಲೇ ನಿಂತು
ಸಣ್ಣ ಸೇವೆಯ ಮಾಳ್ಪ | ತೊತ್ತು, ದಾಸ ||

ಇಂತು ಸರ್ವಾಂಗವನು ಅರೆಮುಗಿದ ಪ್ರಾಣವನು
ಸತತಂ ಮಿಗೆ ನಾನು | ಪದದಲ್ಲಿಡೆ,

ಅಲಟಾದ ಗ್ರೇಡನ್ನ | ತರತರದ ನೆಪ ಹೇಳಿ
ಕೊಡದೆಯೇ ಕೊಲ್ಲುವುದು | ಇದು ಧರ್ಮವೆ ? ||

—ಗೋವಿಂದ.

—o—

# ನಾನು ಕಾಲು ತುಳಿದದ್ದು

ಬೆಂಗಳೂರಿಗೆ ಬನ್ನಿ ಅಂತ ಆತನ ಕಾಗದ ಬರುತ್ತಲೂ, ಇವರು ಕುಣಿಯುವುದಕ್ಕೆ ಪ್ರಾರಂಭ! ಕೈಲೊಂದು ಕಾಸಿಲ್ಲ; ಕೊಡುವವರೊಬ್ಬರೂ ಇಲ್ಲ, ಆದರೂ, ಕುಣಿದಾಟ. "ಹೊಗೋಣ, ಬಾರೆ! ಅಲ್ಲೇ ಒಂದು ಚಾಕರೀನೂ ಗಿಟ್ಟಿಸಬಹುದು; ಕಂಪನಿಗಿಂಪನಿಗಳು ದಿನವೊಂದಕ್ಕೆ ಡಜ಼ಗಟ್ಟಲೆ ಏಳುತ್ತಾ ಇದೆ ಬೆಂಗಳೂರಲ್ಲಿ" ಅಂದರು. ಹೆಣ್ಣು ಹೆಂಗಸು, ನಾನು. ಬಲೆಗೆ ಬಿದ್ದೆ. ಸರಿಯಾಗಿ ಸಾವಿರದ್ದೈನೂರು ರೂಪಾಯಿ ತಂದರು.

ಸ್ಟೇಷನಿಗೆ ಬಂದಿದ್ದ, ಆತ, ಕಾರ್ ಸಹಿತ. ಹೋಗಿ ಕೂತುಕೊಂಡೆವು, ಅದು ಜಪ್ಪಯ್ಯ ಅಂದರೂ ಮುಂದಕ್ಕೆ ಹೋಗಲೊಲ್ಲದು. ಇವರಿಗೆ ಅದರ ಹವ್ಯಾಸ ಕೊಂಚ ಇತ್ತು,. ದೇವರ ದಯೆಯಿಂದ. ಕೆಳಗಿಳಿದು ರೆಕ್ಕೆ ಎತ್ತಿ, ಸರಿಮಾಡಿದರು. ಯಾವುದಾದರೂ ಒಂದು ಹೋಟಲಲ್ಲಿಳೀರಿ, ನನ್ನ ಮನೆಗೆ ಈಗ ನಿಮ್ಮನ್ನ ಕರೆದುಕೊಂಡು ಹೋಗುವಹಾಗಿಲ್ಲ, ನಮ್ಮಪ್ಪ ಬಂದುಬಿಟ್ಟಿದಾನೆ, ಭದ್ರಾವತಿಯಿಂದ ಅಂದ. ನಾರಾಯಣಾ ಅಂತ ದಿನವೊಂದಕ್ಕೆ ೨೫ ರೂ. ಕಿತ್ತು ಕದನ್ನ ಕೊಡೋ ಒಂದು ಸಂಸ್ಥೆಗೆ ಸೇರಿದೆವು.

ಬೆಳಗ್ಗೆ ಎದ್ದು ಅಂಗಡಿ ಸಾಲೆಲ್ಲ ಸುತ್ತಿದೆವು. ಬೇಡ ಬೇಡ ಅಂದರೂನೂ, ನನಗೆರಡು ಸೀರೆ ತೆಗೆದರು. ತಾವು ಎರಡು ಸೂಟು ಹೊಲಿಯುವುದಕ್ಕೆ ಹಾಕಿದರು. ಬಂಡವಾಳ ಕರಗುವ ರೀತಿ ನೋಡಿ ನಾನು ಬೇರೆ ಹೋಟಲು ಹುಡುಕೋಣ, ಅಂದೆ. ಮಧ್ಯಾಹ್ನ ಕುದುರೆ ಜೂಜು ಬೇರೆ, ಕೋತಿಗಳಿಗೆ ಏಣಿ! ಸರಿ, ಅಲ್ಲೊಂದು ನೂರಿನ್ನೂರು ಗಂಗಮ್ಮನ ಪಾಲು.

ಸಂಜೆ ನನ್ನನ್ನ ಹೋಟಲಲ್ಲಿರಿಸಿಬಿಟ್ಟು, ಇವರು ಯಾರಾದರೂ ಸ್ನೇಹಿತರು ಸಿಕ್ಕರೆ, ಸಾಲ ಕೊಡುತ್ತೇನೆ ಅಂತ ಹೋದವರು, ಆತನ ಕಾರನ್ನ ಬೆಲೆ ಮಾತಾಡಿ ಮುನ್ನೂರು ಅಡ್ವಾನ್ಸ್ ಕೊಟ್ಟು, ಕೊಂಡುಕೊಂಡೇ ಬಂದರು. ಮದ್ರಾಸಿನಲ್ಲಿ ಪುನಃ ಮಾರಿದರೆ, ಸಾವಿರ ರೂಪಾಯಿ ಲಾಭ ಬರುತ್ತೆ ಕಣೆ, ನಿನ್ನ ಸರದ ಅಪ್ಪನಂತ ಸರಾನ ಕೆನೇಡಿಯನ್ ಚಿನ್ನದಲ್ಲಿ ಮಾಡಿಸಿ ಹಾಕ್ತೀನೆ, ಅಂತ ಕಣ್ಣು ಮಿಟುಕಿಸಿದರು. ಹೆಣ್ಣು ಹೆಂಗಸು, ನಾನು. ಒಳಒಳಗೇನೆ ಬಿಕ್ಕಿದೆ, ಬೆಪ್ಪು ತಕ್ಕಡಿ ಬೂಟಾಟಿಕೆಗೆ.

ಬೆಳಗ್ಗೆ ನೋಡುತ್ತೀವೆ, ಕೈಯಲ್ಲಿದ್ದದ್ದು ಐದೂ ಚಿಲ್ರೆ! ಒಪ್ಪತ್ತಿಗೂ ಸಾಲದು. ಹೇಗೆ ಅಷ್ಟು ಬೇಗ ತಳ ಕಂಡಿತೋ, ದೇವರೇ ಬಲ್ಲ. ಪೆಟ್ರೋಲಿಗಷ್ಟೊಂದು ಬೆಲೇನೆ, ಬೆಂಗಳೂರಲ್ಲಿ?

ಇವರನ್ನಟ್ಟಿಸಿದ್ರೆ ಇವರ ಸ್ನೇಹಿತನ ಹತ್ತಿರಕ್ಕೆ! ಕಾರೂ ಬೇಡ, ಗೀರೂ ಬೇಡ, ಊರಿಗೆ ಹೋಗೋದಕ್ಕೆ ಕಾಸುಕೊಡು, ಮಾರಾಯ, ಅಂತ.

ಕುಣಿಕುಣೀತಾ ಓಡಿಬಂದರು, ಹಿಂದಕ್ಕೆ. ಆತ್ನನ ಅಪ್ಪನಿಗೆ ತಂತಿ ಬಂತಂತೆ. ಬಸವನಗುಡಿ ಬಂಗ್ಲೆ ಬಿಕೊ ಅಂತ ಖಾಲಿಯಾಗಿದೆಯಂತೆ. ವಾರದ ರೇಷನ್ ಬೇರೆ ಹಾಗೆಯೇ ಉಳಿದಿದೆ. ಅಡಿಗೆಯವ ಇದಾನೆ. ಬೇಕಾದ್ದು ಮಾಡಿಸಿಕೊಂಡು ತಿನ್ನಿ, ಅಂದನಂತೆ. ಆತ ಎಲ್ಲೋ ಯಾವೂರಿಗೋ ತುರುತ್ ಕೆಲಸದ ಮೇಲೆ ಹೋಗಲೇ ಬೇಕಂತೆ.. ನಮ್ಮಿಬ್ಬರನ್ನೂ ನಮ್ಮ ಕಾರಿನಲ್ಲೇ ಕರೆದುಕೊಂಡು ಹೋಗಿ, ಅಲ್ಲಿ ಸ್ಥಾಪಿಸಿ, ಆತ ಹಾರೋಪ್ಲೇನ್ ಹತ್ತೇಬಿಟ್ಟ. ಕಾರೇನೋ ನಮ್ಮ ಕುತ್ತಿಗೆಗೆ ಕಟ್ಟಿದ ಕಲ್ಲು!

ದಿನಕ್ಕಿಪ್ಪತ್ತೈದು ರೂಪಾಯಿ ಉಳಿಯಿತಲ್ಲಾ, ಸಧ್ಯ. ಅಡಿಗೆಯವನೂ ಒಳ್ಳೇ ಪಾಕಶಾಸ್ತ್ರ ಪ್ರವೀಣ. ಹುಳಿ, ತೊವ್ವೆ, ಮಜ್ಜಿಗೆ ಹುಳಿ ಅಂದರೆ, ಡಿ.ಎಸ್.ಸಿ. ಕೊಡಬಹುದು, ಅಂತ ಇವರಂದರು. ಡಿ.ಎಸ್.ಸಿ. ಅಂದರೇನೋ ನನಗೇನು ಗೊತ್ತು....ಹೆಣ್ಣುಹೆಂಗಸು, ನಾನು.

ಅವತ್ತು ಸಂಜೆ, ನಾವು ನಮ್ಮ ಕಾರಲ್ಲಿ ಲಾಲ್‌ಬಾಗಿಗೆ ಹೋದೆವು. ಹೊಸ ಸೀರೆ, ಹಳೆಯ ಕಾರು, ಎರವಲು ಮನೆ,—ಆದರೂ, ಕಿಲಕಿಲ ನಗುತ್ತಾ ಒಬ್ಬರ ಮೇಲೊಬ್ಬರು ಹೂವುಗಳನ್ನು ಕಿತ್ತು ಎಸೆದು ಆಟ ಆಡಿದೆವು.

ಆಗ ಇದ್ದಕ್ಕಿದ್ದ ಹಾಗೆ, ಇವರು "ಅಯ್ಯೋ!" ಅಂದರು. ಕಂಬದ ಹಾಗೆ ನಿಂತುಬಿಟ್ಟರು. ತಿರುಗಿ ನೋಡುತ್ತೇನೆ—ಮೊದಲಿಯಾರ್ರು! ಇನ್ಷೂರೆನ್ಸ್ ಕಂಪನಿ ಮೊದಲಿಯಾರ್ರು. ನನ್ನ ಮುಖ ಕೆಂಚಗಾಯಿತು. ಆದರೂ ಧೈರ್ಯ ತಂದುಕೊಂಡೆ. ನನ್ನನ್ನು ನೋಡಿ, ಇವರೂ ಚೇತರಿಸಿಕೊಂಡರು. ಕುಶಲ ಗಿಶಲ ಕೇಳಿದೆವು. ನಮ್ಮ ಕಾರಿನಲ್ಲೇ ಕೂರಿಸಿಕೊಂಡು, ಹೋಟಲೊಳಕ್ಕೆ ನುಗ್ಗಿದೆವು.

"ಏನಯ್ಯ! ನನ್ನ ಹತ್ರ ಕೆಲಸಕ್ಕೆ ಅಂತ ಮದ್ರಾಸಿನಲ್ಲಿ ಒದ್ದಾಡುತಿದ್ದ ವನು. ಈಗ ಇಲ್ಲಿ ಅನುಕೂಲವಾಗಿರುವ ಹಾಗಿದೆಯಲ್ಲಾ" ಅಂದರು. ಇವರು ಶುದ್ಧ ಪಶು! ಕಾಲೇಜಿನಲ್ಲಿ ಕೆಮಿಸ್ಟ್ರಿ ಓದಿದರೆ, ಕಪಟ ಬರುತ್ತದೆಯೆ? ಪಿಟಿಪಿಟಿ ರಂಗಪ್ಪನ ಹಾಗೆ ನನ್ನ ಕಡೆ ನೋಡಿದರು. ಮೇಜಿನ ಕೆಳಗಿಂದಲೇ, ಇವರ ಕಾಲನ್ನು ಒದ್ದೆ: ತುಳಿದೆ. ಬುದ್ಧಿ ಬಂತು. "ಏನೋ ತಮ್ಮ ದಯ! ಬಸವನ ಗುಡೀಲಿ ಒಂದು ಬಂಗ್ಲೀ ತೆಗೆದುಕೊಂಡಿದೇನೆ....ಚೆನ್ನಾಗಿದೆ" ಅಂದರು.

ಹೂಂ ಗುಟ್ಟಿದರು, ಮೊದಲಿಯಾರ್ರು. ನನಗೆ ಒಳಗೇನೆ ನಗು! ಅಡಿಗೆ ಯಥಾ ಪ್ರಕಾರ ಚೆನ್ನಾಗಿತ್ತು. ಆದರೆ, ಮೊದಲಿಯಾರ್ರು ಅದನ್ನ ಮಿತಿಮೀರಿ

ಹೊಗಳಿದರು. "ತಿಂಗಳಿಗೆ ನೂರು ರೂಪಾಯಿ, ಸ್ವಾಮಿ! ನಳಮಹಾರಾಯನಿಗೆ ಸಂಬಳ!" ಎಂದೆವು. ಮನೆ ಎಲ್ಲ ನೋಡಬೇಕೆಂದರು.

ಹಾಳು! ಆ ಭದ್ರಾವತಿ ಆಸಾಮಿ ನೂರಾರು ಫೋಟೋಗಳು ರೂಂ ರೂಮಲ್ಲೂ ತೂಗಹಾಕಿದ್ದ. ಅವನ ತಂದೆಯನ್ನೇ ನಮ್ಮ ತಾತ ಎಂದೆವು; ಅವನ ಅಕ್ಕ ನನ್ನ ತಾಯಿಯಾದಳು. ಅವನ ಮಕ್ಕಳೆಲ್ಲ ಇವರ ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳಾದರು. ಅವನು ಹರಡಿದ್ದ ಹುಲಿ ಚರ್ಮಗಳೆಲ್ಲ ಇವರ ಅಪ್ಪ ಹೊಡೆದ ಹಾಕಿದ ಹುಲಿಗಳ ಹೊರ ಅಂಗಿಗಳಾದುವು. ಮನುಷ್ಯ ಒಂದನ್ನೂ ಬಿಡದೆ, ಎಲ್ಲಾನ್ನೂ ವಿಚಾರಿಸಿದ. ಕಡೆಗೂ, ಶನಿ ಮನೆಬಿಟ್ಟು ಹೊರಟಾಗ, ರಾತ್ರಿ ಹತ್ತೂವರೆ.

ಉಶ್ಶಪ್ಪ ಅಂತ ಮಲಗಿದೆವು. "ಎಂಥ ದಡ್ಡ! ಎಷ್ಟು ಸುಲಭದಲ್ಲಿ ಮೋಸ ಹೋದ" ಅಂತ ಐವತ್ತು ಸರ್ತಿ ಹೇಳಿಕೊಂಡೆವು.

ಬೆಳಗ್ಗೆ ೧೦ ಗಂಟೆಗೆ, ಮೊದಲಿಯಾರ್ರು ಬಾಗಿಲು ತಟ್ಟಿದರು. "ಅಯ್ಯ! ನಮ್ಮ ಇನ್ಷೂರೆನ್ಸ್ ಕಂಪನಿಗೆ ಈ ಸಂಸ್ಥಾನದ ಮ್ಯಾನೇಜಿಂಗ್ ಏಜಂಟಾಗಿ ನಿನ್ನನ್ನ ನೇಮಿಸಿದೇನೆ; ತಿಂಗಳಿಗೆ ೬೦೦ ಸಂಬಳ" ಅಂದ. ಏನು ಹೇಳೋಣ, ನಾವು? ಹೆಣ್ಣುಹೆಂಗಸು, ನಾನು! ಇವರೋ, ಶುದ್ಧ ಪಶು!" ಬೇಡಿ, ಮೊದಲಿಯಾರ್ರೆ! ಏನೋ, ದೇವರ ದಯೆಯಿಂದ ನಾವು ಇಷ್ಟರ ಮಟ್ಟಿಗೆ...." ಅಂತ ಇವರು ರಾಗ ಎಳೆದರು.

ಆಗ ಮೊದಲಿಯಾರ್ರು, "ಆ ಬೂಟಾಟಿಕೆ ಎಲ್ಲ ನಿನ್ನಲ್ಲೇ ಇಟ್ಟುಕೊ! ಮುಂದಿನ ಕೆಲಸದಲ್ಲಿ ದಿನವೂ ಬೇಕಾಗುತ್ತದೆ. ಅದನ್ನ ಚೆನ್ನಾಗಿ ಮಾಡಬಲ್ಲೆ ಅಂತ ನಿನ್ನೆ ಗೊತ್ತಾದ್ದರಿಂದಲೇ ನಾನು ಈ ಮಾತು ಆಡಿದ್ದು" ಅಂದರು.

ಸರಿ! ಇನ್ನು ಮುಚ್ಚುಮರೆ ಏನು?....ನನ್ನ ಕಣ್ಣಲ್ಲಿ ನೀರೇ ಬಂದು ಬಿಟ್ಟಿತ್ತು! ನಮ್ಮ ಗೋಳನ್ನೆಲ್ಲ ಒಂದೊಂದಾಗಿ ಹೇಳಿದೆವು.

"ನನಗೆ ಮೊದಲು ಅನುಮಾನ ಬರಲಿಲ್ಲ; ನೀವು ನಿನ್ನೆ ಹೊಡೆದ ಬುರುಡೆ ಎಲ್ಲ ನಿಜ ಅಂತಲೇ ಇದ್ದೆ" ಆದರೆ, ಈ ಅಮ್ಮ ನಿನ್ನೆ ಲಾಲ್‌ಬಾಗ್ ಹೋಟೆಲಲ್ಲಿ ನನ್ನ ಕಾಲನ್ನು ತುಳಿದಾಗ, ನಾನು ಹುಷಾರಾದೆ. . ಪರವಾಇಲ್ಲ! ಠಕ್ಕು ಮಾಡೋದನ್ನ ಕಲಿತಿದ್ದೀರಿ! ಇನ್ನು ನನ್ನ ಇನ್ಷ್ಯೂರೆನ್ಸ್ ಕೆಲಸ ನಿರ್ವಹಿಸಬಲ್ಲಿರಿ, ಅಂತ ರಾತ್ರೀನೇ ಇತ್ಯರ್ಥಮಾಡಿಕೊಂಡೆ" ಅಂದರು.

ನನ್ನ ಮುಖ ಕೆಂಚಗಾಯಿತು; ಆದರೂ, ಚೇತರಿಸಿಕೊಂಡೆ.

—ಶೇಸಡಿ

—— o ——

# ಸಭಾತ್ಯಾಗ

**ಮುನಿಸಿಪಲ್ ಸಭೆ:**—ಈ ದಿನ, ಕಂದಾಯ ಬಾಕಿ ಉಳಿಸಿಕೊಂಡಿರುವ ವರ ಪಟ್ಟಿಯನ್ನು ಚರ್ಚೆಗೆ ತೆಗೆದುಕೊಂಡಾಗ, ಮಾನ್ಯ ಸದಸ್ಯರನೇಕರು ಸಭಾತ್ಯಾಗ ಮಾಡಿದರು

**ಜಿಲ್ಲಾ ಸಮ್ಮೇಳನ :**—ಮಾನ್ಯ ಮಂತ್ರಿಗಳು ತಮ್ಮ ಪ್ರಾರಂಭ ಭಾಷಣ ವನ್ನು ಮುಗಿಸಿ, ಮುಂದಿನೂರಿಗೆ ಪ್ರಯಾಣ ಹೊರಟಾಗ, ನೂರಾರು ಸದಸ್ಯರು ಸಭಾತ್ಯಾಗ ಮಾಡಿ ತಮ್ಮ ಮೆಚ್ಚಿಗೆಯನ್ನು ಸೂಚಿಸಿದರು.

**ಕ್ರೀಡಾ ತಂಡದ ಸಭೆ :**—ಉಪಹಾರ ಹಂಚುವುದು ಈ ದಿನ ಕೊಂಚ ತಡವಾದ್ದರಿಂದ, ಅದರ ಸೂಚನೆಯು ಗಾಳಿ ಬೀಸಿದೊಡನೆಯೆ, ಕೆಲವು ಸದಸ್ಯರು ಸಭಾತ್ಯಾಗ ನಡೆಸಿ, ತಮ್ಮ ಕೋಪವನ್ನು ವ್ಯಕ್ತಪಡಿಸಿದರು.

**ರೈತಮಹಾಸಭೆ :**—ಈ ದಿನದ ಸಭೆ ಜರುಗುತ್ತಿದ್ದಾಗ, ಭಾಷಣಕಾರ ರೊಬ್ಬರು "ಗಾಂಧಿ ಟೋಪಿಗಳು" ಎಂಬ ಪದವನ್ನು ಪಯೋಗಿಸುತ್ತಲೂ, ಹಲವು ಮಹನೀಯರು ಸಭಾತ್ಯಾಗ ಜರುಗಿಸಿದರು.

**ಸಂಗೀತ ಸಭೆ :**—ಈ ದಿನದ ಗಾಯಕರು ತಮ್ಮ ರಾಗಾಲಾಪನೆಯನ್ನು ಮೊದಲುಮಾಡಿದ ಕೂಡಲೇ, ವಿದ್ವನ್ಮಣಿಗಳನೇಕರು ಸಭಾತ್ಯಾಗದ ಮೂಲಕ ತಮಗೆ ಆಗಲೇ ಸಾಕಷ್ಟು ಸಂಗೀತ ದೊರೆಯಿತೆಂಬುದನ್ನು ತಿಳಿಸಿದರು.

**ವಾರ್ಷಿಕೋತ್ಸವ :**—ಈ ದಿನ, ಸಭಾಧ್ಯಕ್ಷರು ತಮ್ಮ ಮಾತನ್ನು ಪ್ರಾರಂ ಭಿಸಿದಾಗ, ಸಭಿಕರನ್ನು "ಮಹನೀಯರೇ!" ಎಂದು ಸಂಬೋಧಿಸುವ ಬದಲು "ಗೆಳೆಯರೆ" ಎಂದು, ಎಲ್ಲೋ ಜ್ಞಾನದಲ್ಲಿ ಸಂಬೋಧಿಸಿದ್ದರಿಂದ, ಕೋಲಾಹಲ ವೆದ್ದು, ನೂರಾರು ಮಂದಿ ಸಭಾತ್ಯಾಗವನ್ನಾಚರಿಸಿದರು.

**ಸಹಕಾರ ಸಂಘದ ವಾರ್ಷಿಕ ಸಭೆ :**—ಈ ದಿನ ಸಂಘದ ಕಾರ್ಯದರ್ಶಿ ಸಭೆಗೆ ಬರದೆ ಜಂಟಿ ಕಾರ್ಯದರ್ಶಿಯೇ ಕಾರ್ಯಕಲಾಪಗಳನ್ನು ನಡೆಸಿದರು. ಆದ್ದರಿಂದ ಕಾರ್ಯದರ್ಶಿಯನ್ನು ಟೀಕಿಸಬೇಕೆಂದಿದ್ದ ಮಹನೀಯರುಗಳೆಲ್ಲ ಸಭಾತ್ಯಾಗ ಹೂಡಿ, ಎಲ್ಲಿಗೋ ಹೊರಟುಹೋದರು.

—o—

# "ಲಕ್ಷ್ಮಮ್ಮನವರ ವ್ಯಾಪಾರ"

---

ಲಕ್ಷ್ಮಮ್ಮನವರು ಎಂದೂ ಸ್ವತಂತ್ರಿಸಿ ಒಂದು ವ್ಯಾಪಾರವನ್ನೂ ಮಾಡಿದ್ದಿಲ್ಲ. ಕಡೆಯ ಪಕ್ಷ ಒಂದು ಸೀರೆಯನ್ನಾಗಲೀ, ತಮಗೆ ಒಪ್ಪಿದಂತೆ, ತಾವೇ ಕೊಂಡಿದ್ದಿಲ್ಲ. ಎಲ್ಲಕ್ಕೂ 'ಅವರೇ' ಯಜಮಾನರು. ಒಂದು ಜಾಕೆಟ್ ಹೊಲಿಸುವುದಕ್ಕೂ ಆತನ ಇಚ್ಛೆಯಂತೆಯೇ ನಡೆಯುವ ಪರಿಪಾಟು. ಮದುವೆಯಾಗಿ ಇಪ್ಪತ್ತು ವರ್ಷಗಳಿಗೆ ಬಂದಿದ್ದರೂ, ಆಕೆ ಆತ ಹಾಕಿದ ಗೆರೆಯನ್ನು ಈಷದಪಿ ದಾಟುತ್ತಿರಲಿಲ್ಲವೆಂದರೆ, ಈ ಶತಮಾನದಲ್ಲಿ ಇಂಥಹ ಸ್ತ್ರೀ ವ್ಯಕ್ತಿಯೂ ಇದೆಯೇ ಎನ್ನುವ ಮಟ್ಟಿನ ಆಶ್ಚರ್ಯ ಆಗದೇ ಇರದು.

ಆದರೆ ಈಗ ಏಳೆಂಟು ದಿನಗಳ ಕೆಳಗೆ ಲಕ್ಷ್ಮಮ್ಮನವರು ಇಂತಹ ಸಿಕ್ಕಿನಿಂದ ಬಿಡಿಸಿಕೊಳ್ಳಲು ಪ್ರಯತ್ನಪಟ್ಟರು. ಇದಕ್ಕೆ ಕಾರಣವಿಲ್ಲದೇ ಇಲ್ಲ. ನೆರೆಮನೆ ಪದ್ಮಾವತಮ್ಮ ಉಪ್ಪಿಗೋ, ಬೇಳೆಗೋ ಸಾಲಕ್ಕೆ ಬಂದಿದ್ದಾಗ ಲಕ್ಷ್ಮಮ್ಮನವರು ಉಟ್ಟಿದ್ದ ಸೀರೆಯ ವಿಷಯವಾಗಿ ಹಾಸ್ಯಮಾಡಿ ನಕ್ಕಿದ್ದೇ ಬಂತು.—"ಏನ್ರೀ ಲಕ್ಷ್ಮಮ್ಮ! ಒಂದು ಸೀರೇ ಚುನಾಯಿಸುವುದಕ್ಕೂ ಬರೊಲ್ವೇ ನಿಮಗೆ? ಈ ಬಣ್ಣ ಏನೂಂತ ಕೊಂಡಿರಿ. ಇದೇನು ಹೆಂಗಸರುಡುವಂಥಾ ಸೀರೇನೇ ಇದೂ? ಸರಿಹೋಯ್ತಮ್ಮ ಹೀಗಾದ್ರೇ" ಅಂತ ಆಕೆ ಅಂದದ್ದು. ಅದಕ್ಕೆ ಉತ್ತರವಾಗಿ, ತಾವು ಹೇಳಬಾರದೆಂದು ಮನಸ್ಸಿದ್ದರೂ, ಲಕ್ಷ್ಮಮ್ಮ, "ಅವರು" ಆರಿಸಿ ತಂದದ್ದು ಅವರಿಗಿಷ್ಟವಾದದ್ದನ್ನ ನಾನು ಉಟ್ಟಿದ್ದೇನೆ ಅಷ್ಟೆ" ಎಂದರು. ಈಗಂತೂ ಪದ್ಮಾವತಮ್ಮನವರು ಬಿದ್ದೂ ಬಿದ್ದೂ ನಕ್ಕರು. "ಅದೂ ಈ ಶತಮಾನದಲ್ಲಿ ಹೀಗೆ ಮಾತನಾಡೋರನ್ನ ನೋಡೇ ಇಲ್ಲಮ್ಮ. ದೇವತೆಗಳಲ್ಲೂ ಈ ಮಟ್ಟಿನ ನೀತಿ ಇಲ್ಲ. ಕೇಳಿಲ್ವೇ, ನಿಮ್ಮ ಹೆಸರಿನಾಕೆ, ಸಾಕ್ಷಾತ್ ಲಕ್ಷ್ಮೀದೇವೀ ಕೂಡ ತನ್ನ ಗಂಡನೊಡನೆ ಜಗಳವಾಡಿಕೊಂಡು ಹೊರಟುಹೋದದ್ದನ್ನು....ಪೇಪರ್ ನೋಡ್ತಿದ್ದರಂತೂ ಚೆನ್ನಾಗಿಯೇ ತಿಳೀತಿತ್ತು. ಹಿಂದೂ ಕೋಡ್‌ನ ಬದಲಾಯಿಸಿ, ಗಂಡಸರನ್ನೇ ಕೋಡಗಾ" ಮಾಡ್ತಿರೋವಾಗಲೂ ಹೀಗೆ ಹೇಳೋರ್‍ನ ಕಂಡ್ರೆ ರೇಗುತ್ತೆ ...ನೀವುಡೋ ಸೀರೇನ ಚುನಾಯಿಸೋರು ನಿಮ್ಮ ಜಮಾನ್ರು! ....ಸದ್ಯ, ಇನ್ನೆಲ್ಲೂ ಹೇಳ್ಕೋಬೇಡಿ...ಈ ಸಲ ಹೇಗಾದ್ರೂ ಮಾಡಿ ಒಳ್ಳೇ 'ಇಂಗ್ಲಿಷ್' ಕಲರ್ ಸೀರೇನಾ ನೀವೇ ಚುನಾಯ್ಸಿ ಕೊಂಡುಕೊಳ್ಳಿ" ಅಂತಂದು ಆಕೆ ಮನೇ ಕಡೆ ಧಾವಿಸಿದರು.

ಲಕ್ಷಮ್ಮನವರಿಗೆ ಬಹಳ ವ್ಯಸನವಾಯಿತು. ಗಟ್ಟಿಯಾಗಿ ಅತ್ತುಬಿಡುವಷ್ಟು ಅವಮಾನವಾಯಿತು. ಪುನಃ ಪುನಃ ಪದ್ಮಾವತಮ್ಮನವರ ಮಾತುಗಳನ್ನು ನೆನೆಸಿಕೊಳ್ಳುತ್ತಾ ವಿಮರ್ಶಿಸಿದರು. ಕಡೆಗೆ ಆಕೆ ಹೇಳಿದ್ದೇ ಸರಿ ಎನಿಸಿತು. ಅಷ್ಟಲ್ಲದೆ, ಹಿರಿಯರು "ಗಂಡಸಿಗೇಕೆ ಗೌರೀ ದುಃಖ?" ಅಂತಗಾದೇ ಮಾಡುತ್ತಾರೆಯೇ? "ಈ ಸಲ ಹೇಗಾದರೂ ನನ್ನ ಸೀರೇನಾ ನಾನೇ ಚುನಾಯಿಸಿ ತರಬೇಕೂ"ಂತ ಅಂದು ಕೊಂಡರು.

ಯಜಮಾನರಲ್ಲಿ ತಿಳಿಸಿ ದುಡ್ಡು ತೆಗೆದುಕೊಳ್ಳುವ ಧೈರ್ಯ ಆಕೆಗಿರಲಿಲ್ಲ. ಆದರೆ ತಾವೇ ಚುನಾಯಿಸಿ ತೆಗೆದುಕೊಳ್ಳುವ ಸೀರೆ ಯಾವ ಪರಿಣಾಮ ಉಂಟು ಮಾಡೀತೋ ನೋಡಬೇಕೆಂದು ಆಗಾಗ್ಗೆ ಪೂಜೆಪುನಸ್ಕಾರಗಳಿಗಾಗಿ ಕೊಡುತ್ತಿದ್ದ ಚಿಲ್ಲರೆಯಲ್ಲಿ ಎರಡು ಮೂರು ವರ್ಷಗಳಿಂದಲೂ ಮಿಗಿಸಿ ಕೂಡಿಟ್ಟಿದ್ದ ಹದಿನಾರು ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಸೀರೆಕೊಳ್ಳಬೇಕೆಂದು ನಿಶ್ಚಯಿಸಿದಳು. ಆದರೆ ಅಂಗಡಿಗೆ ಹೋಗಿ ವ್ಯಾಪಾರಮಾಡುವುದು ಹೇಗೆ? ಅಕಸ್ಮಾತ್ ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಿದ್ದಾಗ ಯಜಮಾನರೂ ಆಕಡೆ ಬಂದು ಬಿಟ್ಟರೆ ಗತಿ? ಹೀಗೆಲ್ಲಾ ಯೋಚಿಸಿದ ಲಕ್ಷಮ್ಮನವರಿಗೆ ಇನ್ನೊಂದುಪಾಯ ಹೊಳೆಯಿತು. ತಮಗೆ ಬಾಡಿಗೆಗೆ ಕೊಟ್ಟಿರುವ ಮುಂದಿನ ಮನೆಯ ಲಲಿತಮ್ಮನವರ ಸಹಾಯ ಪಡೆದರೆ ಸರಿಹೋಗುತ್ತೇಂತ, ಅವರೊಡನೆ ತಮ್ಮ ಸಲಹೆ ತಿಳಿಸಿದರು. "ನೋಡಿ, ಲಲಿತಮ್ಮ! ನಿಮ್ಮ ಮಗಳು ಶಾರದಮ್ಮ ಇದ್ದಾರಲ್ಲಾ, ಅವರು ಸೀರೆ ಚುನಾಯಿಸೋದರಲ್ಲಿ ನಿಪುಣರೂಂತ ನನಗೆ ಗೊತ್ತು. ಅಂಗಡಿ ಇಂದ ಒಂದು ಐದಾರು ಸೀರೇ ತರಿಸಿ. ನಾನೊಪ್ಪಿ ಒಂದು ತೆಗೆದುಕೊಳ್ತೇನೆ. ಈವಿಷಯ ನಮ್ಮ ಮನೆಯೋರಿಗೆ ತಿಳೀದಂತೆ ನಡೀಬೇಕೂ"ಂತ ಕೇಳಿಕೊಂಡರು ಲಕ್ಷಮ್ಮ. ಶಾರದಮ್ಮ ಇಂಥ ವಿಷಯದಲ್ಲಿ ಮುತುವರ್ಜಿ ಹೆಚ್ಚು. ಹೀಗಾದರೂ ಪರಸ್ಪರ ಸಹಾಯ ಮಾಡೋಣಾಂತ, ಶಾರದಮ್ಮ ತಮ್ಮ ಮನೆ ಜವಾನನ ಕೈಲಿ, ಕಾಳಾಜಿ ಅಂಗಡಿಯಿಂದ 5–6 ಸೀರೆಗಳನ್ನು ತರಿಸಿದರು. ಲಕ್ಷಮ್ಮನವರು ಒಂದನ್ನು ಒಪ್ಪಿಕೊಂಡದ್ದೂ ಆಯಿತು. ಶಾರದಮ್ಮ ವ್ಯಾಪಾರದಲ್ಲಿ ಚೌಕಾಶಿಮಾಡಿ ಹದಿನೇಳು ಹೇಳಿದ ಸೀರೆಯನ್ನ ಹದಿನಾರಕ್ಕೇ ವ್ಯಾಪಾರ ಮಾಡಿ ಕೊಡಿಸಿದರು.

ಸೀರೆ ಒಳ್ಳೆಯ ಕಪ್ಪು ಬಣ್ಣದ್ದು. 'ಬಳ್ಳಾರಿ-ಧಾರವಾಡದ' ನಮೂನೆ. ಹಳದೀ ಅಂಚು—ಪೂನ ಶೆರಗು. ದೂರಕ್ಕೆ 'ಸಿಲ್ಕ್'ನ ಹಾಗೆ ಮಿಂಚು ಇತ್ತು. ಅಂತೂ, ಪಾಪ ಲಕ್ಷಮ್ಮ "ದೇವರದಯೆ ಚೆನ್ನಾಗಿದೆ ನನ್ನ ಮೇಲೆ. ಈ ಬಾರಿ ಯಾದ್ರೂ ಒಳ್ಳೆ ಸೀರೆ, ನಾನೇ ಕೊಂಡ್ಕೊಳ್ಳೋ ಅದೃಷ್ಟ ಕುಲಾಯಿಸ್ತೂ"ಂತ ಅಂದ್ಕೊಂಡ್ರು.

2–3 ದಿನಗಳವರೆಗೆ ಸೀರೆ ಉಡಲೇ ಇಲ್ಲ. ಎಷ್ಟಾದರೂ ಮಾಧ್ವ ಸಂಪ್ರದಾಯಸ್ಥರಿಗೆ ಸರಿಯಾಗಿರಬೇಡವೇ ಸೀರೆ. ಹದಿನೆಂಟು ಮೊಳಕ್ಕೆ ಕಮ್ಮಿ ಉಡುವ ಹಾಗೇ ಇಲ್ಲ. ಲಕ್ಷಮ್ಮನವರಿಗಂತೂ ಹದಿನೆಂಟೂ ಬೇಕು. ಮೂರು ದಿನಗಳ ನಂತರ ಆಕೆ ಸೀರೆ ಉಟ್ಟು ನೋಡಿದರೆ, ಅಗಲ—ಉದ್ದ ಎಲ್ಲಾ ಕಮ್ಮಿಯೋ ಕಮ್ಮಿ. ಅಯ್ಯೋ ರಾಮ! ಇಷ್ಟು ದಿವಸದಿಂದಲೂ ಸ್ವತಂತ್ರಿಸದೇ ಇದ್ದ ನಾನು ಇದಕ್ಕೇಕೆ ಇಟ್ಟೆ ದಂಡಾನಾ? ಈಗ ಕೊಂಡ್ಕೊಂಡೇಂತ ಹೇಳಿದರೆ 'ಅವರು' ತರುವುದೂ ಸೊನ್ನೆಯಾಗುತ್ತೆ" ಅಂತಂದ್ಕೊಂಡು ಆಕೆ ಪುನಃ ಶಾರದಮ್ಮನವರನ್ನೇ ಸಹಾಯ ಕೋರಿದರು.

ಶಾರದಮ್ಮ ತಮ್ಮ ಮನೆ ಜವಾನನ ಮೂಲಕ ಅಂಗಡಿಯವನಿಗೆ ವಾಪಸು ತೆಗೆದುಕೊಳ್ಳಲು ಹೇಳಿಕಳುಹಿಸಿದರು. ಕಾಳಾಜಿ ಈ ವಿಷಯದಲ್ಲಿ ಬಹು ಸರಳ ಸ್ವಭಾವದವನು. "ಅದಕ್ಕೇನು ಆಗಬಹುದು. ಅಂಗಡೀಲೇ ಇಟ್ಟಿರ್ತೀನಿ. ಇನ್ಯಾರಾದ್ರೂ ಕೊಂಡ್ಕೊಂಡ ತಕ್ಷಣಾನೇ ನಿಮ್ಮ ದುಡ್ಡು ವಾಪಸು ಮಾಡ್ತೇನೇ"ಂತ ಅಂದ. ಅಗಲ ಮೊಳವಿಲ್ಲದ ಸೀರೇನ ಉಡೋಕಿಂತ ವಾಪ್ಸು ಮಾಡೋದೇ ಮೇಲೂಂತ ಲಕ್ಷಮ್ಮನವರು ಅದಕ್ಕೂ ಒಪ್ಪಿಕೊಂಡರು. ಅವರ ಮನಸ್ಸಿನಲ್ಲಿ ಮಟ್ಟಿಗೆ ತಮ್ಮ ಈ ವ್ಯವಹಾರದ್ದು ಕುರುಹು ಸ್ವಲ್ಪವೂ ತಮ್ಮ ಯಜಮಾನರಿಗೆ ಗೊತ್ತಾಗಬಾರದೆಂದು. ಇನ್ನು ಮುಂದೆ ತಾವು ಸ್ವತಂತ್ರಿಸುವುದೇ ತಪ್ಪೆಂದೂ, ಎಲ್ಲಾ ವಿಚಾರಗಳಲ್ಲಿಯೂ ಯಜಮಾನರ ಛಾಯೆಯಂತೆ ತಾನಿರಬೇಕೆಂದೂ ಆಕೆ ಬಯಸಿದರು.

ಆಕೆ, ಈ ಕಾರಣ 5–6 ದಿನಗಳು ಕಳೆದ ಮೇಲೆ ಸರಿಯಾದ ಒಂದು ಸೀರೆ ತಂದು ಕೊಡಬೇಕೆಂದು ಯಜಮಾನರನ್ನೇ ಕೇಳಿದರು. ಬಹಳ ದಿನಗಳಿಂದಲೂ ಸುಮ್ಮನಿದ್ದು ಈಗ ಕೇಳಿರುವ ತಮ್ಮ ಪತ್ನಿಯ ವಿಷಯದಲ್ಲಿ ಯಜಮಾನರಿಗೆ ಮರುಕ ತೋರಿರಬೇಕು. ಆ ಕ್ಷಣವೇ ತಮ್ಮ ಪತ್ನಿಯ ಕೋರಿಕೆಯನ್ನು ನೆರವೇರಿಸುವ ಹುಚ್ಚು ಅವರಿಗೆ ಆವರಿಸಿತು. ಎಂದೂ ಚಿಕ್ಕಪೇಟೆಗೆ ಹೋಗಿ ಸರಿಯಾದ ಸೀರೆಯನ್ನು ತರುತ್ತಿದ್ದ ಅವರು, ಮರು ನಿಮಿಷದಲ್ಲೇ ಮನೆಬಿಟ್ಟು ಹೊರಟರು. ನೆಟ್ಟಗೆ ಕಾಳಾಜಿಯ ಅಂಗಡಿಗೇ ಹೊರಟರು. ಅಂಗಡಿಯಲ್ಲಿ ಮಿರಮಿರನೆ ಮಿರುಗುತ್ತಾ ಗಿರಾಕಿಗಳನ್ನು ಸ್ವಾಗತಿಸುತ್ತಾ ಕುಳಿತಿದ್ದ ಕಪ್ಪು ಸೀರೆಯೇ ಅವರಿಗೂ ಒಪ್ಪಾಗಬೇಕೇ? ಅಗಲ—ಮೊಳಗಳನ್ನು ಕೇಳದೆಯೇ, `ಅವನು ಹೇಳಿದ ಬೆಲೆಗೆ ಎಂಟಾಣೆ Commission ಹೊಡೆದು, ಹದಿನಾರು ರೂಪಾಯಿ ಎಂಟಾಣೆ ಕೊಟ್ಟು ಆ ಸೀರೆಯನ್ನೇ ಕೊಂಡರು. ಅವರ ಮನಸ್ಸಿನಲ್ಲಿ ತಮ್ಮ ಆರಿಕೆಯನ್ನು ನೋಡಿ

ಮನೆಗೆ ಹೋಗುತ್ತಲೇ ತಮ್ಮ ಪತ್ನಿ ಲಕ್ಷ್ಮಮ್ಮನವರು ಹೊಗಳಿ, ಸಂತೋಷ ಪಡುವರೆಂದು. ಆದರೆ ?....

ಕಾಳಾಜಿ, 'ವಾಪಸಾದ ಸೀರೆ ಬಿಕರಿಯಾಯಿತಲ್ಲಾ' ಅನ್ನುವ ಸಂತೋಷ ದಿಂದ, ಮಾರಿಕೊಟ್ಟದ್ದಕ್ಕೆ ಎಂಟಾಣೆ ಕಮಿಷನ್ ಜಾತಾ ಹದಿನೈದೂವರೆ ರೂಪಾಯಿಗಳನ್ನು ತನ್ನ ಆಳಿನ ಕೈಲಿ ಲಕ್ಷ್ಮಮ್ಮನವರಿಗೆ ತಲಪಿಸಿದ. ಅಂತೂ ಈ ವ್ಯವಹಾರದಿಂದ ಪತಿ ಪತ್ನಿಯರಿಗೆ ಒಂದು ರೂಪಾಯಿ ಹೆಚ್ಚು "ಲಾಭ" ವಾದರೂ, ಆಕೆ ಪುನಃ ಗಂಡನನ್ನು ಸೀರೆ ವಾಪಸು ಮಾಡಲು ಕೇಳಿಕೊಳ್ಳಲಿಲ್ಲ.

—ಪಂಡಿತ್.

---



ಮೈಸೂರಿನವ—ನಮ್ಮ ಛತ್ರಿ ಇದೆ ಬಾ ತಮ್ಮಾ!

ಅವ—ಅಣ್ಣಾ! ಛತ್ರಿ ನೋಡಿದರೆ ಧೈರ್ಯಾನೆ ಬರುಲ್ಲವಲ್ಲಾ!

# ಅಹಿಂಸೆ

ಆತ ಪಾಲೀ ಕಲಿತಿದ್ದ—ಯಾಕೆ ಗೊತ್ತೆ? ಬುದ್ಧ ಮಹಾನುಭಾವನ ಬುದ್ಧಿವಾದವನ್ನ ಮೊಖ್ತಾ ಕಲಿಯಲು.—ಕಲಿತೂ ಇದ್ದ ಗಂಡುಗಲಿ. ಆ ಸೀಮಾ ಪುರುಷನ ವರ್ಚಸ್ಸು ಇವನ ಮೇಲೆ ಬೀಳದೆ ಇರಲಿಲ್ಲ. ಹಾಗಾಗಿ ಅವನನ್ನು ನಾವು “ಭಂತೇ!’ ಎಂದೇ ಕರೆಯುತ್ತಿದ್ದೆವು.

*　　　　*　　　　*

ಒಂದು ಸಾಯಂಕಾಲ ಅವ ವಿರಾಮವಾಗಿ ಸಿಕ್ಕ—ಅದೂ ಇದೂ ಮಾತನಾಡುತ್ತ, ಕಲೆಯ ಪ್ರಗತಿ, ಮನಸ್ಸಿನ ಪರಿಣಾಮ, ಜೀವನದಲ್ಲಿ ಹಿತ, ಇವೆಲ್ಲಾ ಹೇಗೆ ನಮ್ಮ ಮತೋದ್ಧಾರಕರಲ್ಲಿ—ಮತ ಸಂಸ್ಥಾಪಕರಲ್ಲಿ ಅಧಿಕವಾಗಿತ್ತು ಎಂಬುದು ಬೌದ್ಧ ಜಾತಕಗಳಲ್ಲಿ ಹೇಗೆ ವಿಶದೀಕರಿಸಿವೆ; ಎಂದು ಹೇಳತೊಡಗಿದ.

“ಬಾ ಮನೆಗೆ ಹೋಗೋಣ. ಆ ಜಾತಕಗಳಿಂದ ಒಂದೆರಡು ಚೂರು ಓದಿ ತೋರಿಸುತ್ತೇನೆ” ಎಂದು ಮನೆಗೆ ಕರೆದುಕೊಂಡು ಹೋದ.

*　　　　*　　　　*

ಮನೆಯಲ್ಲಿ ಒಂದು ದಢೂತಿ ಪುಸ್ತಕ ತೆಗೆದ. ತೆಗೆಯುವಾಗಲೇ ಹೇಳಿದ —“ಬೌದ್ಧಮತದ ತಿರುಳು ಅಹಿಂಸೆ ನಮ್ಮ ಬಾಪೂವಿನಂತೆ—ಅದರ ಮೇಲೆಯೇ ಮತಸ್ಥಾಪನೆ ಎಂದ.

*　　　　*　　　　*

ಅಷ್ಟು ಹೊತ್ತಿಗೆ ಆ ದಢೂತಿ ಜಾತಕದ ಪುಸ್ತಕ ತೆಗೆದ ರಭಸದಲ್ಲಿ, ಆ ಪುಸ್ತಕದ ಅಲ್ಮೈರಾದಿಂದ ಒಂದು ಚೇಳು ನೆಲದಮೇಲೆ ಬಿತ್ತು.

—ನಮ್ಮ ಅಹಿಂಸಾ ಪಟು, ಕೂಡಲೇ, ಆ ಬೌದ್ಧ ಜಾತಕ ಪುಸ್ತಕದಿಂದ ಆ ಚೇಳನ್ನು ಹರಹರಾ! ಅನ್ನಿಸಿದ.

—“ಅಯ್ಯೊ ”

—o—

# " ಏನನ್ಯಾಯ ! "

---

ಏನನ್ಯಾಯ್ಯ ಅಂತೀರಿ !
ಷರಾಯಿನ್ನೆರಿ ಮುದುರಿಕೊಂಡಾಗ
ಮಂಚದ ಮೇಲೆ
ಹಾಸಿಗೆ ಕೆಳಗೆ
ಸರಿಯಾ ಗಿಟ್ಟರೆ,
ಷರಾಯಿನ್ನೆರಿ ಮೂರೇ ದಿನದಲ್ಲಿ
ಗರಿ ಗರಿಯಾಗಿ ನಿಂತುಕೊಳ್ಳುತ್ತೆ !
ಆದರೆ,
ಏನನ್ಯಾಯ ಅಂತೀರಿ,
ಹಾಸಿಗೆ ಸುತ್ತಿ,
ಹಾಸಿಗೆ ಬಿಚ್ಚಿ,
ಹಾಸಲೇ ಬೇಕು, ದಿನಾಗಲೂ
ಷರಾಯಿನ್ನೆರಿ ಸರಿಯಾಗಿರ್ಬೇಕು
ಅಂದರೆ ! ಅಲ್ಲವೇ ?

— ಶಿವು.

— o —



# ಆಫೀಸ್ ಶಿಸ್ತು

---

ಮೊನ್ನೆ, ನಾನು ಒಬ್ಬರ ಆಫೀಸರನ್ನ ನೋಡಹೋಗಿದ್ದೆ....ಇರುತ್ತದಲ್ಲಾ ನೂರೆಂಟು ತರಲೆ ತಾಪತ್ರಯಗಳು. ಅವರ ಕೋಣೆಯೊಳಕ್ಕೆ ನುಗ್ಗುತ್ತಲೂ ವ್ಯಾಘ್ರದರ್ಶನವೇ ಆದಂತಾಯಿತು. "ಏನಯ್ಯಾ! ಬುದ್ಧಿಗಿದ್ದಿ ಇದೆಯೋ ಇಲ್ಲವೋ? ನನ್ನ ಪರ್ಸನಲ್ ಅಸಿಸ್ಟೆಂಟರನ್ನು ಮೊದಲು ನೋಡಿ, ಅವರ ಅಪ್ಪಣೆ ಪಡೆದು, ನಂತರ, ನನ್ನನ್ನ ನೋಡಿ ಮಾತನಾಡಿಸಬೇಕು ಅನ್ನೋದು ಗೊತ್ತೇ ಇಲ್ಲವೋ?" ಅಂತ ಗರ್ಜಿಸಿದರು.

ಪಕ್ಕದ ಕೋಣೆಗೆ ನುಗ್ಗಿ, ಪೂಜಾರಿಗೆ ಕೈಮುಗಿದೆ. ಕೋಣೆ ಅಂದರೆ, ಕೋಣೆ ಅಲ್ಲ. ಒಂದು ಸ್ಕ್ರೀನು! ಅದರ ಈಚೆ, ದೇವರು; ಆಚೆ, ಪಿ. ಎ. ಸಾಹೇಬರು.

"ಸಾರ್! ಕೊಂಚ ದೊಡ್ಡ ಸಾಹೇಬರನ್ನು ಕಾಣಬೇಕಾಗಿತ್ತು" ಅಂದೆ. "ನಿಮ್ಮ ಹೆಸರೇನ್ರಿ?" ಅಂದರು. "ಕೋಡಿಹಳ್ಳಿ ಮುನಿಸಾಮಿ" ಅಂದೆ. ಕೂತಕಡೆಯಿಂದಲೇ, ಸ್ಕ್ರೀನಾಚೆ ಇದ್ದ ದೊಡ್ಡ ಸಾಹೇಬರನುದ್ದೇಶಿಸಿ, "ಸಾರ್! ಕೋಡಿಹಳ್ಳಿ ಮುನಿಸಾಮಿಗಳು ನಿಮ್ಮನ್ನ ಕಾಣಬಂದಿದಾನೆ; ಕಳುಹಿಸಲೆ?" ಅಂದರು.

ದೊಡ್ಡ ಸಾಹೇಬರು ಆ ಕಡೆಯಿಂದ, "ಯಾಕಂತೆ?" ಅಂದರು. ಚಿ. ಸಾಹೇಬರು, "ಯಾಕ್ರಿ?" ಅಂದರು. ನಾನು, ಗಟ್ಟಿಯಾಗೀನೆ, "ಇನ್ನೇನೂ ಇಲ್ಲ, ಸಾರ್! ರಸ್ತೆ ರಿಪೇರಿ ಕಂಟ್ರಾಕ್ಟ್ ತೆಗೆದುಕೊಂಡಿದ್ದೆ. . ಹಣ ಇನ್ನೂ ಬಂದಿಲ್ಲ. ಬಿಲ್ ಕಳುಹಿಸಿ ಮೂರು ತಿಂಗಳಾಯ್ತು" ಅಂದೆ. ಚಿ. ಸಾಹೇಬರು, "ಸಾರ್! ಇನ್ನೇನೂ ಇಲ್ಲವಂತೆ; ರಸ್ತೆ ರಿಪೇರಿ ಕಂಟ್ರಾಕ್ಟ್ ತೆಗೆದುಕೊಂಡಿದ್ದರಂತೆ; ಹಣ ಇನ್ನೂ ಬಂದಿಲ್ಲವಂತೆ; ಬಿಲ್ ಕಳುಹಿಸಿ... (ಎಷ್ಟು ತಿಂಗಳಾಯಿತ್ರಿ? ಮೂರೇ?) ಮೂರು ತಿಂಗಳಾಯ್ತಂತೆ" ಅಂದರು. ಅದಕ್ಕೆ ಆಚೆಯವರು, "ಅದಕ್ಕೆ ಇಲ್ಲಿ ಬಂದು ನನ್ನ ತಲೆ ಮೇಲೆ ಕೂತುಕೊಳ್ಳಬೇಕೇನು, ಕೇಳಿ" ಅಂದರು. ಚಿ. ಸಾಹೇಬರು, ನನ್ನ ಕಡೆ ತಿರುಗಿ, "ಅದಕ್ಕೆ ಇಲ್ಲಿ ಬಂದು ನನ್ನ... ಅಲ್ಲ... ದೊಡ್ಡ ಸಾಹೇಬರ ತಲೆ ಮೇಲೆ ಕೂತುಕೊಳ್ಳಬೇಕೇನು, ಅಂತ ಕೇಳಿ, ಅಂತಾರೆ" ಅಂತ, ನನಗೆ ಅದನ್ನ ರವಾನಿಸಿದರು.

ಆಗ, ನಾನು "ನನ್ನ ಹೊಟ್ಟೆ ಮೇಲೆ ಹೊಡೆದರೆ, ನಾನೇನು ಮಾಡೋದು ..ಧಣಿ ತನಕ ದೂರು" ಅಂದೆ. ಅದನ್ನ ಸ್ಕ್ರೀನಾಚೆಗೆ ತಲಪಿಸುತ್ತ, ಚಿ. ಸಾಹೇಬರು "ಸಾರ್! ಅವರ ಹೊಟ್ಟೆಮೇಲೆ ಹೊಡೆದರೆ, ಅವರೇನು ಮಾಡ ಬೇಕು, ಅಂತ ಕೇಳುತ್ತಾರೆ, ನೀವು ಧಣಿ ತನಕ ದೂರಬಹುದು ಅಂತಾರೆ" ಅಂದರು. "ಏನು?" ಅಂತ ಆ ಕಡೆಯಿಂದ ಕಿಡಿನುಡಿ ಹಾರಿತು. ಚಿ. ಸಾಹೇಬರು, ನನ್ನನ್ನ, "ಏನ್ರಿ ಅದು? ಏನ್ರಿ ನೀವು ಹೇಳಿದ್ದು" ಅಂದರು.

"ನೀವು ಹೇಳಿದ್ದನ್ನ ನಾನು ಹೇಳಿಲ್ಲ, ಸ್ವಾಮಿ," ಅಂತ, ನಾನಂದೆ. ಆಗ, ಚಿ. ಸಾಹೇಬರು, ದೊಡ್ಡ ಸಾಹೇಬರಿಗೆ "ಸಾರ್! ನಾನು ಹೇಳಿದ್ದನ್ನ ಅವರು ಹೇಳಿಲ್ಲವಂತೆ; ಅದನ್ನ ಹೇಳಿದ್ದು, ನಾನೇ" ಅಂತ ತಿಳಿಸಿದರು. "ಮತ್ತೆ ಅವರು ಯಾಕ್ರಿ ಬಂದಿದಾರೆ?" ಅಂದರು ದೊಡ್ಡ ಸಾಹೇಬರು.

"ಅದೇ ನನಗೆ ಇನ್ನೂ ಅರ್ಥವಾಗಿಲ್ಲ" ಅಂತ ಹೇಳುತ್ತಾ, ನಾನು ಹೊರ ಬಿದ್ದೆ.

—ಕೆ. ಮುನಿಸ್ವಾಮಿ.

——— o ———




"ಹೆಚ್ಚು ಆಹಾರ ಬೆಳೆಯಿರಿ'' ಅಂದರೆ, ಹೀಗೇ ಶುರುಮಾಡೋದೇ?

# ಕನ್ನಡ ಸಾಮ್ರಾಜ್ಯವೋ? ═══ ═══ ಕನಸಿನ ಸಾಮ್ರಾಜ್ಯವೋ?

---

### ೧. ಕನ್ನಡಿಗರ ಕೂಗು

ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು
ಬದುಕು ಬಲಹಿನ ನಿಧಿಯು ಸದಭಿಮಾನದ ಗೂಡು || ಪ ||
ಪಾವನೆಯರಾ ಕೃಷ್ಣೆ ಭೀಮೆಯರ ತಾಯ್ನಾಡು
ಕಾವೇರಿ ಗೋದೆಯರು ಮೈದೊಳೆವ ನಲುನಾಡು ...

### ೨. ಮೈಸೂರು ಕನ್ನಡಿಗ (ಮೊದಲು)

ಕನ್ನಡವೆನೆ ಕುಣಿದಾಡುವುದೆನ್ನೆದೆ
ಕನ್ನಡವೆನೆ ಕಿವಿ ನಿಮಿರುವುದು,
ಕಾಮನ ಬಿಲ್ಲನು ಕಾಣುವ ಕವಿವೊಲು
ತೆಕ್ಕನೆ ಮನವ್ಮೈ ಹರಿಯುವುದು,
ಕನ್ನಡ! ಕನ್ನಡ! ಹಾ ಸವಿಗನ್ನಡ!

### ೩. ಮೈಸೂರು ಕನ್ನಡಿಗ (ಈಗ)

ಕನ್ನಡ ನಾಡಾಗಲಿ ಬೇಡವೆಂದವರಾರು?
ಚಿನ್ನದ ನಾಡಾಗಲಿ ಕೂಡದೆಂದವರಾರು?
ಕನ್ನಡ ಬಾವುಟವೇರಿ ಮೆರಿಯಲಿ
ನೀಲಿ ಬಣ್ಣದ ಬಾನಿನೊಳು! ತಾಯಿ
ಕನ್ನಡ ಸಾಮ್ರಾಜ್ಯದೇವಿಯೇರಲಿ
ತನ್ನ ರತ್ನ ಖಚಿತ ಸಿಂಹಾಸನವ!
ತಡವೇಕಿನ್ನು. ನಡೆಯಲಿ ಕನ್ನಡನಾಡ ರಚನೆ,
ಧಾರ್ವಾಡ! ಮಂಗ್ಳೂರು! ಗುಲ್ಬರ್ಗ!
ಸೇರಲೊಂದಾಗಿ ತಡವಿಲ್ಲದಂತೆ!

**ಯಾರೋ ಒಬ್ಬರು**

ಮೈಸೂರು ?...............

**ಮೈಸೂರು ಕನ್ನಡಿಗ**

ಚಿನ್ನದ ನಾಡಿದು ಮೈಸೂರು !
ಬಣ್ಣದ ಬೆಡಗಿದು ಮೈಸೂರು !
ಗಂಧದ ಗುಡಿಯಿದು ಮೈಸೂರು !
ನಮಗೇ ಇರಲಿ ಮೈಸೂರು !

**ನಾಂದಿ**

ಭಾರತ ವರ್ಷಶ್ಚ, ಲಿಂಗ್ವಿಸ್ಟಿಕ್ ಪ್ರಾಂತಶ್ಚ
ಕನ್ನಡ ಪ್ರಾಂತ ನಿರ್ಮಾಣಾಂ ಯುಗೇ ಯುಗೇ !

ಡಿ. ವೆಂಕಟೇಶ ಮೂರ್ತಿ,
ಹೈದರಾಬಾದು. (ದಕ್ಷಿಣ)

———o———




ಎಷ್ಟು ಚೆನ್ನಾಗಿದೆ ಈ 'ಟೈ'ಗಳು.
ಬ್ಲೌಸ್ ಬಾರ್ಡರಿಗೆ ಒಪ್ಪುತ್ತೆ !

# ಎಂತಹ ಶಹಣೆ ಅವ!



ನಾನು ಮ್ಯಾಟನಿ ನೋಡಿಕೊಂಡು ಮನೆಗೆ ಬರ್ತಾ ಇದ್ದೆ—ಮಧ್ಯಾಹ್ನ ಮಾಡಿದ ನುಚ್ಚಿನ ಉಂಡೆ ಏನಾದರೂ ಬಾಕಿ ಇದೆಯೋ ಅಂತ—ಈಗಿನ ಕಾಲದಲ್ಲಿ ಹೋಟಲು ಏನು ಸುಖ ಅಂತ!

ನನ್ನ ಎದುರಿಗೇ ಒಂದು ನೂರು ಗಜ ದೂರದಲ್ಲಿ ಒಂದು ಜೀಪ್ ಬರುತ್ತಿತ್ತು. ಐವತ್ತು ಗಜದೂರದಲ್ಲಿ ಒಂದು ಹಯಶಕಟ ಬರುತ್ತಿತ್ತು. ಪಕ್ಕದಲ್ಲಿ ನನ್ನ ಜತೆಗೆ ಒಬ್ಬ ಸೈಕಲ್ ಸವಾರ ನನ್ನ ಹಾದೀಲೇ ಬರ್ತಿದ್ದ.

ಜೀಪ್ ಚೀರಿತು. ಹಯ ಕೆನೆಯಿತು. ಹಯಶಕಟದ ಸಾರಥಿ ಅಲ್ಲಾ ಗೇ! ಅಂದ. ನನ್ನ ಜತೆಯಲ್ಲಿ ಮೊದಲಿದ್ದವ ಅಯ್ಯಯ್ಯೋ! ಎಂದ. ಇವರು ಮೂವರೂ ಒಂದೇ ಕಡೆ ಹೆಚ್ಚು ಕಡಿಮೆ ಸಂಧಿಸಿದಾಗ.

ನಾನಾಗ ಇಪ್ಪತ್ತು ಅಡಿ ಹಿಂದೆ ಪುಟ್ಪಾತಿನಲ್ಲಿ ಬೈಸಿಕಲ್ ಒರಗಿಕೊಂಡು ನಾಲ್‌ಮರದ ಮರೆಯಲ್ಲಿ ನಿಂತಿದ್ದೆ.

ಜಟ್ಕಾ ಚಕ್ರ ಜೀಪ್ ಮುಂಚಕ್ರಕ್ಕೆ ಮುತ್ತುಕೊಟ್ಟು, ಮುಂಬಂದ ಸೈಕಲ್ಲಿನ ಮುಂದಿನ ಚಕ್ರವನ್ನಪ್ಪಿಕೊಂಡಿತು. ಜೀಪಿನ ಹಿಂಚಕ್ರ ಸೈಕಲ್ಲಿನ ಹಿಂಚಕ್ರವನ್ನಪ್ಪಿಕೊಂಡಿತು.

ಸೈಕಲ್ ಸವಾರ ಕೆಳಗೆ ಬಿದ್ದ. ತಲೆಗೆ ಏಟು ಬಿತ್ತು.

ಅವ ಎಂತಹ ಶಹಣೆ ಅಂತ—ಬೇಗೆದ್ದು ತನ್ನ ಕರವಸ್ತ್ರಾನ ತಲೆಗೆ ಕಟ್ಟಿದ, ರಕ್ತ ಬರದಂತೆ—ಬೈಸಿಕಲ್ ಬಿಡಿಸಿಕೊಂಡ. ಆಂಬುಲನ್ಸ್ ಗಾಡಿಗಳಿಗೆ ಇರುತ್ತಲ್ಲಾ, ದೊಡ್ಡ ದೇವಸ್ಥಾನದಲ್ಲಿರುತ್ತಲ್ಲಾ ಅಂತಹ, ಗಂಟೆ ಒಂದನ್ನ ತನ್ನ ಚೀಲದಿಂದ ತೆಗೆದ. ಅದನ್ನ ಬೈಸಿಕಲ್ ದೀಪದ ಕೊಂಡಿಗೆ ಸಿಕ್ಕಿಸಿದ—ನೆಟ್ಟಗೆ ಆಸ್ಪತ್ರೆ ಕಡೆ ಸವಾರಿ ಬಿಟ್ಟ. ಆಂಬುಲನ್ಸ್ ಸೈಕಲ್ ಮೇಲೆ—

ಅಲ್ಲಾ! ಎಂತಹ ಶಹಣೆ ಅವ!

—ಕುಮಾರ್.

—o—

ಬಂಗಾಳಾದ ಮಂತ್ರಿಮಂಡಳದ್ದಾಯ್ತು.

—ಮದ್ರಾಸಿನಲ್ಲಿ ಪುನಃ ವಿಚಾರಣೆ ಆಗಬೇಕಂತೆ.

—ಈಗ ಮಿಕ್ಕ ಪ್ರಾಂತ್ಯಗಳಲ್ಲಿ ಆಗಲೇ ಕಳವಳ ಉಂಟಾಗಿದೆಯಂತೆ.

—o—



ದೊಡ್ಡ ದೊಡ್ಡ ಕ್ಲಾಸಿಗೆ ಹೋಗ್ತಾ ಹೋಗ್ತಾ ಪುಸ್ತುಕ ಚಿಕ್ಕ ಚಿಕ್ಕದಲ್ಲವೇ?

# ಡಾ|| ಡಾಮೊದರಂರ ಅಮೂಲ್ಯ ವರದಿ

— o —

ಡಾ|| ಡಾಮೋದರಂ, ಉಭಯ ಖಂಡ ಪ್ರಚಂಡ. ಅವರಷ್ಟು ಬುದ್ಧಿವಂತರು ಅಮೇರಿಕಾದಲ್ಲೂ ಇಲ್ಲ, ಏಷ್ಯಾದಲ್ಲೂ ಇಲ್ಲ. ಕೊಂಚ ನಶೀಬು ಮಾತ್ರ ಅವರಿಗಿದ್ದಿದ್ದರೆ....ಆದರೆ, ಆ ಮಾತು ಈಗೇಕೆ? ಅವರ ಸಂಶೋಧನಾ ಸಾಮರ್ಥ್ಯವನ್ನು ಮಾತ್ರ ಗಮನಿಸೋಣ .......

ವಾಸಕ್ಕೆ ಮನೆ ಇಲ್ಲದೆ ಪರಿತಪಿಸುವ ಪಶ್ಚಿಮ ಪಂಜಾಬೀಯರಿಗೂ ಪೂರ್ವ ಬಂಗಾಲೀಯರಿಗೂ, ಮಧ್ಯಮ ವರ್ಗೀಯರಿಗೂ, ಏನಾದರೂ ಒಂದು ಪರಿಹಾರ ಕಂಡು ಹಿಡಿಯಬಾರದೆ, ಎಂದು ಸುಂದರಲಾಲ್ ಸೂಚಿಸಿದಾಗ, ಡಾ||ಗೆ ಕೋಪ ಉಕ್ಕಿಬಂತು. ಹಾಗೆ ಬರುವುದು ಸಹಜ. ಏಕೆಂದರೆ, ವಿಜ್ಞಾನ ಶಾಸ್ತ್ರಿಗಳು ಲೀಲಾವಿನೋದರು; ಅವರ ವಿಚಾರ ಸಿಂಧುವನ್ನು ಯಾರೂ ಅತ್ತಿತ್ತ ತಿರುಗಿನಕೂಡದು: ಮನ ಬಂದಂತೆ, ದನ ಹೋದಂತೆ, ಅವರು ತಮ್ಮ ಪ್ರತಿಭೆಯನ್ನು ಪ್ರತಿಭಟನೆ ಇಲ್ಲದೆ ಹರಿಸಲೆಳೆಸುವರು. ಆದರೂ, ಸುಂದರಲಾಲ್‌ರ ಸೂಚನೆ ಡಾ||ರ ಕಿವಿಯ ಕದವನ್ನು ಮೆಲ್ಲಗೆ ತಳ್ಳುವುದಕ್ಕೂ, ಮುಖ್ಯಪ್ರಾಣ ಕೊಠಡಿಯ ಕದವನ್ನು ಮೆಲ್ಲಗೆ ತಳ್ಳಿ ಚಹ ತರುವುದಕ್ಕೂ, ಗಳಿಗೆ ಕೂಡಿಬಂತು. ಡಾ||ರು ಗುಳಿಗೆಯನ್ನು ನುಂಗಿದರು. ಅದರ ಕೆಲಸ ಅದು ಪ್ರಾರಂಭಮಾಡೇ ಬಿಟ್ಟಿತು.

ಡಾ|| ಡಾಮೋದರಂ ದಿನವೂ ನಿದ್ದೆಯಲ್ಲೇ ಒಂದೆರಡು ತಾಸು ವಾಕಿಂಗ್ ಹೋಗುವ ಪದ್ಧತಿ. ಇದರಿಂದ, ಮನಸ್ಸಿಗೆ ವಿಶ್ರಾಂತಿ, ದೇಹಕ್ಕೆ ವ್ಯಾಯಾಮ —ಎರಡೂ ಏಕಕಾಲದಲ್ಲಿ ಅವರಿಗೆ ದೊರೆಯುತ್ತಿತ್ತು. ಅಂಥ ವಾಕಿಂಗ್ ಕಾಲದಲ್ಲೇ ಅವರು ಸಾಮಾನ್ಯವಾಗಿ ಮೆದುಳನ್ನು ಕಲಕಿ ಕುಲುಕುವುದು. ಪಾದೇಪಾದೇ, ಅವರು ತಮ್ಮ ಮೆದುಳು ಎಂಬ ಬಾವಿಯೊಳಕ್ಕೆ, ಕಿಂಕರಣೀಯಂ ಎಂಬ ಬಕೆಟ್ಟನ್ನು ಇಳೀ ಬಿಟ್ಟರು.

ವಾಸದ ಮನೆಗಳು ಸಾಲದಿರುವ ನಮ್ಮ ದುರವಸ್ಥೆಯನ್ನು ಇತರ ಇಂಜಿನಿಯರುಗಳು ಬಗೆ ಬಗೆಯಾಗಿ ಬಗೆಹರಿಸಲು ಯತ್ನಿಸಿದಾರೆ. ಗರ್ಡರಿಗೆ ಬದಲು, ಗೋಣಿರಟ್ಟು, ಸಿಮೆಂಟಿಗೆ ಬದಲು ಸೀಗೇಪುಡಿ, ಕಲ್ಲಿಗೆ ಬದಲು ಹುಲ್ಲು,

ಉಪಯೋಗಿಸಿ ಹೆಸರು ಗಳಿಸಿದಾರೆ. ಸುಣ್ಣವಿಲ್ಲದೆ ಗಾರೆ, ಮೆಟ್ಟಿಲಿಲ್ಲದೆ ಮಹಡಿ ನೀರೇ ಇಲ್ಲದೆ ನಲ್ಲಿ, ಪರ್ಮಿಟ್ಟೇ ಇಲ್ಲದೆ ಪದಾರ್ಥ, ಊರುಗೋಲಿಲ್ಲದೆ ಸೂರು, ಭವನವೇ ಇಲ್ಲದೆ ಭುವನೇಶ್ವರಿ—ಒದಗಿಸಿದಾರೆ, ಮಾಡಿದಾರೆ. ಆದರೆ, ಒಬ್ಬರು ತುಳಿದ ದಾರಿಯನ್ನು ಡಾ||ರು ಎಂದಿಗೂ ತುಳಿಯೋದಿಲ್ಲ. ಅವರು ಸಲಗದಂತೆ! ಅವರು ನಡೆದದ್ದೇ ಅವರಿಗೆ ದಾರಿ. ಅವರ ಮೆದುಳ ಮಂಥನದ ಬಗೆಯೇ ಬೇರೆ; ಅದರಿಂಗಾಗುವ ನವನೀತ ನವನವೀನ.

ವಾಸದ ಮನೆ ಎಂದರೆ ಏನು? ಅಡುಗೆ ಮನೆ, ಸ್ನಾನದ ಮನೆ, ಬೆಡ್ರೂಮು, ಓದುವ ಕೋಣೆ, ಒಂದಿಷ್ಟು ಗಾಳಿ, ಬೆಳಕು—ಅಷ್ಟೇ ಅಲ್ಲವೆ? ಹಾಗಾದರೆ, ಈಗ ಬೆಂಗಳೂರು, ಬೊಂಬಾಯಿ, ಮದ್ರಾಸ್ ಮುಂತಾದ ನಗರಗಳಲ್ಲಿ, ಎಷ್ಟು ಮನೆಗಳಿವೆ, ಎಷ್ಟು ಮನೆಗಳು ಇನ್ನು ಬೇಕು, ಎಂಬ ಪ್ರಶ್ನೆಗಿಂತ, ಎಷ್ಟು ಅಡುಗೆ ಮನೆಗಳಿವೆ, ಎಷ್ಟು ಉಗ್ರಾಣಗಳಿಲ್ಲ, ಎಷ್ಟು ದೇವರ ಮನೆಗಳು ಖಾಲಿ, ಇತ್ಯಾದಿ ಅಂಕಿ ಅಂಶಗಳು ಹೆಚ್ಚು ಪ್ರಯೋಜನಕರ. ದಿನಕ್ಕೆ ೨೪ ಗಂಟೆಕಾಲ, ಹಾಲಿ ಇರುವ ಕೋಣೆಗಳೆಲ್ಲ ಉಪಯೋಗಿಸಲ್ಪಡುತ್ತಿವೆಯೇ, ತನಿಖೆ ಮಾಡಬೇಕು. ಇಲ್ಲದಿದ್ದರೆ, ಅವುಗಳನ್ನು ಸಂಪೂರ್ಣವಾಗಿ ಸರ್ವದಾ ಉಪಯೋಗಿಸಲು ಏರ್ಪಾಟು ಮಾಡೋಣ. ಉದಾಹರಣೆಗೆ, ಏಕಾದಶಿ ದಿನ, ಕಾವೇ ಹತ್ತದ ಎಷ್ಟು ಒಲೆಗಳಿಲ್ಲ, ಬೆಂಗಳೂರಲ್ಲಿ! ಒಂದೊಂದು ಮೊಹಲ್ಲಾಗೆ ಒಂದೊಂದು ದಿನ ಏಕಾದಶಿ ಅಂತ ಪಂಚಾಂಗ ಹೊರಡಿಸಿದರೆ, ಆಯಾಕಡೆ ಆ ದಿನ ಖಾಲಿಬೀಳುವ ಅಡಿಗೆ ಮನೆಗಳನ್ನು ಅಷ್ಟುಷ್ಟು ಸಂಸಾರಗಳಿಗೆ ಹಂಚಿ, ಅಲ್ಲಲ್ಲಿ ಅವರು ಅಂದಂದು ಅಡಿಗೆ ಪೂರೈಸಿ ಊಟಮುಗಿಸಿ, ಬಾಗಿಲು ಹಾಕಿಕೊಂಡು, ಹೊರಡಬಹುದಲ್ಲವೆ? ಮರುದಿನ ಮತ್ತೊಂದು ಮೊಹಲ್ಲಾದ ಏಕಾದಶಿ ಅಡಿಗೆ ಮನೆಗಳಿಗೆ ನುಗ್ಗಿ ಅಲ್ಲಿ ಅವರು ಅಡಿಗೆ ಮಾಡಿಕೊಳ್ಳಬಹುದು. ಮುನಿಸಿಪಾಲಿಟಿ ಲಾರಿಗಳಲ್ಲೇ ಜನಗಳನ್ನು ಖಾಲಿಯಿಂದ ಖಾಲಿಗೆ ರವಾನಿಸುತ್ತಿರಬಹುದು.

ಬೆಳಗ್ಗೆ ಎಂಟು ಗಂಟೆ ಹೊತ್ತಿಗೆ ತಮ್ಮ ಈಗಿನ ಆಫೀಸ್ ರೂಮನ್ನು ಖಾಲಿ ಮಾಡಿ, ಅಂಗಡಿಗಳಿಗೂ, ಕಾರ್ಯಕ್ಷೇತ್ರಗಳಿಗೂ, ಆಸ್ಪತ್ರೆಗಳಿಗೂ, ಹೋಗುವವರ ಖಾಲಿ ಕುರ್ಚಿಗಳಿಗೆ, ಓದಲು ರೂಮಿಲ್ಲದ ವಿದ್ಯಾರ್ಥಿ ಮಹಾಶಯರನ್ನು ಲಾರಿಗಳಲ್ಲಿ ರವಾನಿಸಬಹುದು. ಸಂಜೆ ಸೆಕೆಂಡ್‌ಷೋ ಸಿನಿಮ ನೋಡಲು ಹೋಗುವ ದಂಪತಿಗಳ ಪಟ್ಟಿಯನ್ನೂ ವಿಳಾಸವನ್ನೂ ಮೊದಲೇ ಗೊತ್ತುಮಾಡಿ, ಅವರ ಕೋಣೆಗಳಿಗೆ, ಮನೆಯಿಲ್ಲದೆ ಪೇಚಾಡುವ ದಂಪತಿಗಳನ್ನು ರವಾನಿಸಬಹುದು. ಕಾರ್ಖಾನೆಗಳಲ್ಲಿ ನೈಟ್‌ಷಿಫ್ಟ್ ಕೆಲಸಮಾಡುವ

ಪುರುಷರ ಪತ್ನಿಯರನ್ನೆಲ್ಲ, ಒಟ್ಟುಗೂಡಿಸಿ ಮಹಿಳಾ ಸಮಾಜಕ್ಕೆ ರವಾನಿಸಿ, ಆಯಾ ಮನೆಗಳಲ್ಲಿ, ಕ್ರಮವಾಗಿ, ಸರದಿಮೇರೆ, ಮಲಗಲು ಮನೆ ಸಿಕ್ಕದೆ ಒದ್ದಾಡುವವರಿಗನುಕೂಲ ಮಾಡಿಕೊಡಬಹುದು... ... ಮುಖ್ಯವಾಗಿ ಇದಕ್ಕೆ ಬೇಕಾದ್ದು ಧೈರ್ಯ, ತಿಳಿವಳಿಕೆ, ಸೇವಾಬುದ್ಧಿ, ಸರ್ಕಾರದ ಬೆಂಬಲ. ಹೀಗೆ ಹೀಗೆ ಮಾಡಿದರೆ, ಹೊಸ ಮನೆಗಳನ್ನು ಕಟ್ಟದೆಯೇ, ನೂರಾರು ಹೊಸ ಸಂಸಾರ ಗಳನ್ನು ಕುದುರಿಸಬಹುದು.

ಬೆಂಗಳೂರಿನಂಥ ಕಾರ್ಪೊರೇಷನಿಗೆ ೩೦೦ ಲಾರಿಗಳಿದ್ದರೆ, ಸಾಕು; ೩೦೦೦ ಹೊಸ ಮನೆಗಳು ಕಟ್ಟಿದಾಗಿನಷ್ಟು ಅನುಕೂಲ ಮಾಡಿಕೊಳ್ಳಬಹುದು. ಅಲಸೂರಲ್ಲಿ ಸ್ನಾನ, ಗುಟ್ಟಹಳ್ಳಿಯಲ್ಲಿ ಅಡಿಗೆ, ಗವೀಪುರದಲ್ಲಿ ಓದು, ಆಡು ಗೋಡಿಯಲ್ಲಿ ಹರಟೆ, ಬಸವನಗುಡಿಯಲ್ಲಿ ಊಟ, ಅರಾರಾಕಛೇರಿಯಲ್ಲಿ ನಿದ್ದೆ, ....ಹೀಗೆ ಒಂದು ಸಂಸಾರದ ಒಂದು ದಿನದ ಕಾರ್ಯಕ್ರಮವನ್ನು ಗೊತ್ತು ಮಾಡಬಹುದು. ಮೊದಮೊದಲು ಬೇಸರವಾದರೂ, ಅಭ್ಯಾಸಬಲದಿಂದ ಎಲ್ಲ ಸರಿಹೋಗುತ್ತದೆ. ಅಲ್ಲದೆ, ಈ ನನ್ನ ಯೋಜನೆಯಿಂದ, ಹಣದ ಉಬ್ಬರವೂ ಕಡಮೆಯಾಗುತ್ತದೆ; ಗ್ಯಾಸ್ ಲಾರಿಗಳಾದರೆ ಡಾಲರ್ ಬೇಕಾಗಿಲ್ಲ" ಎಂದು ಡಾ|| ಡಾಮೋದರಂ ರಿಪೋರ್ಟಿನಲ್ಲಿ ಬರೆದರು.

ಸುಂದರಲಾಲ್ ಅದನ್ನು ಗಾಡ್ಗಿಲ್ಲಾದಿಯಾಗಿ ಮರಾಮತ್ ಮಂತ್ರಿಗಳಿ ಗೆಲ್ಲ ಕಳುಹಿಸಿದರು. ಅವರಿಂದ ಅದು, ಸೆಕ್ರೆಟರಿ, ಜಂಟಿ ಸೆಕ್ರೆಟರಿ, ಅಸಿಸ್ಟೆಂಟ್ ಸೆಕ್ರೆಟರಿ ಮಾರ್ಗವಾಗಿ, ಸೂಪ್ರೆಂಡ್, ಹೆಡ್ ಕ್ಲಾರ್ಕ್ ಮೂಲಕ ಡಿಸ್ಪಾಚಿಂಗ್ ಕ್ಲಾರ್ಕರ ಕೈಗೆ ಬಂತು. ಅವರು ಅದನ್ನ ಓದಿ ಅರ್ಥಮಾಡಿಕೊಳ್ಳಲಾರದೆ ಕಸದ ಬುಟ್ಟಿಗಳಿಗೆ ಎಸೆದದ್ದು ಭರತಖಂಡದ ದುರ್ದೈವ! ಅಷ್ಟು ಹೊತ್ತಿಗೆ, ಡಾ|| ಡಾಮೋದರಂ ಬೇರೊಂದು ಸಂಶೋಧನೆಯಲ್ಲಿ ಮುಳುಗಿ ಬಿಟ್ಟಿದ್ದರು.

— ಪಾಟೀಳಿ.

———— o ————

ನೈಸರ್ಗಿಕ ಹಿನ್ನೆಲೆ ಚೆನ್ನಾಗಿದ್ದರೆ, ಏನನ್ನಾದರೂ ಅನುಭವಿಸಲು ಸೊಗಸು.

—ಆಹಾ! ಈಚಲಮರದ ಕೆಳಗೆ ಮಜ್ಜಿಗೆ ರುಚಿ ಅಲ್ಲವೇ?

# ಕೊರವಂಜಿ

ಬಳೇಪೇಟೆ : : ಬೆಂಗಳೂರು 2

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

ವಾರ್ಷಿಕ ಚಂದಾ: 3 ರೂ.ಗಳು (ಅಂಚೆ ವೆಚ್ಚ ಸಹಿತ)


## ನಮ್ಮ ಮಾರಾಟಗಾರರು

| | |
|---|---|
| ಶ್ರೀ ಎಗ್. ವಿ. ಅನಂತಾಚಾರ್ಯ | ಚಿತ್ರದುರ್ಗ |
| ,, ಭಾರತ್ ಬುಕ್ ಡಿಪೋ | ಧಾರವಾಡ |
| ,, ಚಂದ್ರಶೇಖರಯ್ಯ | ನಂಜನಗೂಡು |
| ,, ಚಾರಿ ಮತ್ತು ರಾಯು | ಹೈದರಾಬಾದು |
| ,, ವಿ. ಕೆ. ಗೋಕಲೆ | ಹುಬ್ಬಳ್ಳಿ |
| ,, ಕೆ. ವಿ ಗುಪ್ತ | ಚಿಂತಾಮಣಿ |
| ,, ಗುರುನಾಥನಾಯಕ್ | ಹರಿಹರ |
| ,, ಗುರುರಾಜಾಚಾರ್ಯ | ರಾಬರ್ಟ್ಸನ್‌ಪೇಟೆ |
| ,, ಎಸ್. ಎಲ್ ಎಗ್. ನ್ಯೂಸ್ | ಮಂಡ್ಯ |
| ,, ಎಂ. ಕೃಷ್ಣರಾವ್ | ಭದ್ರಾವತಿ |
| ,, ಎಂ. ಎಗ್. ಕೇಶವಮೂರ್ತಿ | ಹಾಸನ |
| ,, ಕರ್ನಾಟಕ ಇಂಕ್ ಕಂಪನಿ | ಬಾಗಲಕೋಟೆ |
| ,, ಕೆ. ಎಂ. ಅಂದನೂರು | ದಾವಣಗೆರೆ |
| ,, ವಿ. ಲಕ್ಷ್ಮಣರಾವ್ | ಮದ್ರಾಸು |
| ,, ಮಹರಾಜಪೇಟೆ | ಹಾವೇರಿ |
| ,, ಮುನಿವೆಂಕಟಪ್ಪ | ಯಶವಂತಪುರ |
| ,, ಎಂ. ನಾಗಪ್ಪಶೆಟ್ಟಿ ಮತ್ತು ಮಕ್ಕಳು | ಶಿವಮೊಗ್ಗ |
| ,, ಎಚ್. ಎಂ. ನರಶಿಂಹ್ಮಯ್ಯ ಶೆಟ್ಟಿ ಮತ್ತು ಮಕ್ಕಳು | ಕಡೂರು |
| ,, ಎ. ನಾರಾಯಣಚಾರ್ಯ | ಚೆನ್ನಪಟ್ಟಣ |
| ,, ನಾರಾಯಣ ಶೆಣೈ | ಮಂಗಳೂರು |
| ,, ಕೆ. ಪ್ರಹ್ಲಾದರಾವ್ | ಚಿಕ್ಕಬಳ್ಳಾಪುರ |
| ,, ರೇಡಿಯೆಂಟ್ ನ್ಯೂಸ್ ಏಜನ್ಸಿ | ಮೈಸೂರು |
| ,, ಕೆ. ರಂಗಪ್ಪ | ಹೊಸಪೇಟೆ |
| ,, ವಾಲ್ಮೀಕಿ ರಂಗಾಚಾರ್ಯ | ಕೃಷ್ಣರಾಜಸಗರ |
| ,, ಷಹ ಶ್ಯಾಮಜಿ ಜೀತಾಬಾಯ್ | ಗದಗ |

An emotional love Drama offering you
a feast of entertainment !
Pulls the grandest Music by



Anil Biswas

★ ★

You have ever heard
by the favourite
Stars of the day

NARGIS
AND
DILIP KUMAR

★ ★

Ambica Films'

# ANOKHA PYAR

ON

**Ramzan Idd Day**

## AT PALACE TALKIES

BANGALORE

Released through

**AJANTA PICTURES,** Gandhi Nagar,
Bangalore City

*Contact for Parakh, Dassi & Bela also.*

Koravanji, August 1949

REG. NO. M. 4718 KORAVANJI, AUG. 1949



Printed by B. S Iyengar, Bangalore City
Publisher— B N. Gupta. Editor - M. Shivaram